# ಉಷಾಸ್ವಪ್ನ

(ಕವನ ಸಂಕಲನ)

ಎಸ್. ಅನಂತನಾರಾಯಣ

ಗಂಗಾ



ತರಂಗ

ಸರಸ್ವತೀಪುರಂ, ಮೈಸೂರು

USHASWAPNA (a collection of poems) by Prof. S. Ananthanarayana. Published dy Ganga Taranga, Saraswathipuram, Mysore.
P.p. 4 + 66. Price Rs. 12-00

First Edition-1948

Second Edition (revised)-1990





ಬೆಲೆ : ರೂ. 12-00

ಪ್ರಕಾಶನ : 'ಗಂಗಾತರಂಗ' 5ನೇ ಮುಖ್ಯರಸ್ತೆ, ಸರಸ್ವತೀಪುರಂ, ಮೈಸೂರು-570009

ಮುದ್ರಣ : ಮಿತ್ರ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು-570 008

# ವಿಷಯ ಸೂಚಿ

# ಉಷೆಗೆ

ಯುಗ ಯುಗಗಳೇಕಾಂತಗೀತ ಹಾಡುತನಂತ
ನೋವಿನಲಿ ಕಾತರಿಸೆ ನನ್ನ ಉಷೆ ಬಂದೆ.
ನಿನ್ನ ಬೆಳಕಲಿ ನಿನಗೆ ಸನ್ನೆದೆಯ ಕಿರು ಹಣತೆ
ಅರ್ಪಿಸಿದೆ; ನೀನೊಪ್ಪಿ ಒಲವ ಬಾಳಿಸಿದೆ.

ನಾನು ಕವಿ, ನೀ ಕಾವ್ಯ !– ನಾ ಬರೆದ ಗೀತಗಳು
ನಿನ್ನ ಒಲವಿನ ನೂರು ಸೊಗಸು ನೆರಳು !
ನೀ ಬೆಳಸಿ ಬಾಳಿಟ್ಟ ನನ್ನ ಕಾವ್ಯದ ಬಳ್ಳಿ
ಹೂವಿಡುವ ಮುನ್ನವೇ ನೀ ಬಾಡಿಹೋದೆ !

ಅಂದು, ನೀನಿದ್ದಾಗ, ಈ ಕವಿತೆಗಳ ಮಾಲೆ
ಒಲವ ಮಂಗಳಸೂತ್ರ ನಿನ್ನ ಕೊರಳಲ್ಲಿ–
ಆ ಆಸೆ ಇಂದೆಲ್ಲಿ ? – ಇವು ನಿನ್ನ ನೆನಪಿನಲಿ
ಹೃದಯ ಅರ್ಪಿಸುತಿರುವ ಭಾವದಶ್ರುಗಳು !

# ನೀನೆ ನನಗೆಲ್ಲ

ಮುಂದೆ ಸುಖ ಬಹುದೆಂಬ ಭ್ರಾಂತಿಯಿಲ್ಲ,
ಹಿಂದಿನದು ಹೋಯ್ತೆಂಬ ಚಿಂತೆಯಿಲ್ಲ,
ಇಂದು ಪರಿಪೂರ್ಣತೆಯೊ, ಶೂನ್ಯವಹುದೋ,
ಎಲ್ಲ ನಿನ್ನಾಸರೆಗೆ–ನೀನೆ ನನಗೆಲ್ಲ.

# ಕತ್ತಲೇ ಉಳಿದ ಬಗೆ ?

ಕಾರಿರುಳ ಗವಿಯಲ್ಲಿ ಎಲ್ಲಿಂದಲೋ ಒಂದು
ಕಿರಣ ಒಳಹೊಕ್ಕಂತೆ, ನನ್ನ ಜೀವನದಲ್ಲಿ
ನಿನ್ನ ಎಳೆತನದ ನಗು ತುಂಬಿ ತೂರುತ ಬಂದು
ಬೆಳಗಿತ್ತು ಎದೆಯನ್ನು. ಹೃದಯದುಮ್ಮಳದಲ್ಲಿ,
ಆನಂದದೆಲರಿನಲಿ, ಕಳೆದ ಕಾಲದ ಕಳೆದ
ದುಸ್ವಪ್ನಗಳನೆಲ್ಲ ಮರೆತು ನಾ ಕುಣಿದಿದ್ದೆ.
ಮುಂದೆ ಇಂತೇ ಇಹುದು, ನೀನೆ ಬಾಳಿನ ಹಸದ,
ಎನುತ, ಆ ಅರೆಗಳಿಗೆ ಒಲವ ಹೂ ಮುಡಿದಿದ್ದೆ !
ಸ್ವಪ್ನ ನಾಚುತ ಹಗಲೊಳವಿತಂತೆ, ನೀನೋಡಿ
ಸಾವಿನಲಿ ಮರೆಯಾದೆ ! ನಿನ್ನ ರೂಪದಲಾನು
ಯುಗಯುಗಗಳೇಕಾಂತ ಮನಕೆ ಮಾಡಿದ ಮೋಡಿ
ಬೆಳಕನೆರಕವ ಹೊಯ್ದು, ನನ್ನ ಜೀವವೆ ನೀನು
ಎಂದಿದ್ದೆ–ನನ್ನ ಉಷೆ–ಬಿಸಿಲುಗೋಲಿನ ಹಾಗೆ
ಅರ್ಧ ಕ್ಷಣ ನೀನಾದೆ ! ಕತ್ತಲೇ ಉಳಿದ ಬಗೆ ?

# ಯಾವ ಹಾಡನು ನಾ ಹಾಡಲಿ ?

ಯಾವ ಹಾಡನು ನಾ ಹಾಡಲಿ,
ಇನ್ನು-ಬಾಳಿನ ಉಷೆಯನಂ ಎಚ್ಚರಿಸಲಿ ?

ಬಂಗಾರ ಬಯಲಲಿ
ಸಿಂಗಾರ ಬೆಳೆಯಲಿ
ತಂದು ಇಕ್ಕಿದರೊಂದು ಕಿಡಿ ಬೆಂಕಿ !

ಬೆಳೆಯೆಲ್ಲ ಉರಿ ತಾಗಿ,
ಬಯಲೆಲ್ಲ ಹೊಗೆಯಾಗಿ
ಉಳಿದುದೆಲ್ಲವು ಇಲ್ಲಿ — ಎದೆ ಬೆಂಕಿ !

ನೋವನರಿಯದ ಬಾಳು
ಬಾಳಲ್ಲ, ಬರಿ ಬೀಳು ;
ನೋವಿನ ನಿಜವರಿತ ಬಾಳು ಗೋಳು !

ಒಲವಿನ ಗೆಳತಿಯ
ಹೃದಯದ ಪ್ರಣತಿಯ
ಮತ್ತೆ ಹೊತ್ತಿಸಲೆಂತು—ಹಾಡಲಿ ?

# ಹಗಲು - ಹರಿಗೋಲು

ಇಂದು ನೀ ಬಂದಿರುವೆ. ನನ್ನ ಬಾಳಿನ ಹಗಲು —
ಹರಿಗೋಲು. ಹುಚ್ಚು ಹೊಳೆ ಕರೆಗಿನ್ನು ಬೆಚ್ಚಿಲ್ಲ !
ಕಾರ್ಗತ್ತಲೆಯ ಕಂಡು, ಮೊಗ್ಗಾದ ಮನದರಳು
ಉಷೆ ಬರಲು, ಕಮಲದೊಲು ಕಂಪಿನಿಂ ಸುಖಿಸೊಲ್ಲ
ಹರಹುತಿದೆ, ಮೈಯರಿತು ! ಕೊನೆತನಕ ನೀನುಳಿದು
ಜತೆಗಿರಲು, ಚಿಂತೆಯನು ನೂಕುವೆನು ಮೊಗೆ ಮೊಗೆದು !

# ಹೋದಳುಷೆ – ಬಂತು ನಿಶೆ

ದೇವರಲ್ಲಿ ಹಸಿದನಂತೆ,
ಎನಿತಿತ್ತರು ಸಾಲದಂತೆ,
ಹಾಳುಹೊಟ್ಟೆ ಹಿಂಗದಂತೆ,
ಆದಕೆ ಜೀವ ಬಲಿಗಳಂತೆ.
ಹೋದಳುಷೆ—ಬಂತು ನಿಶೆ !

ನಾವಿಬ್ಬರು ಕೂಡಿದಾಗ,
ಎರಡು ಹೃದಯದೊಂದು ರಾಗ
ಮೋಡಿಯಿಡಲು, ಕಾಲನಾಗ
ಹರಿದು ಕಚ್ಚಿತವಳ ಬೇಗ.
ಹೋದಳುಷೆ—ಬಂತು ನಿಶೆ !

ಜೀವ ಜೀವವೊಂದುಗೂಡಿ,
ಒಲವು ನಲವು ಬೆಸೆಯೆ ಜೋಡಿ,
ಸುಖ ನಗೆಗಳ ಆಟ ಹೂಡಿ,
ಕುಣಿವವೆನಲು—ಕಾಲ ಕಾಡಿ,
ಹೋದಳುಷೆ—ಬಂತು ನಿಶೆ !

ಒಲವ ರಾಸಿ, ರೂಪ ಬಲುಮೆ,
ನನ್ನ ಹೃದಯದೆಲ್ಲ ಹಿರಿಮೆ,
ನಾಡಿ ನಾಡಿಯೊಳಗ ನುಡಿಮೆ
ನಲ್ಮೆ ನವಿಲು, ಚೆಲುವ ಚಿಲುಮೆ
ಹೋದಳುಷೆ—ಬಂತು ನಿಶೆ !

ಹೊಸ ಹರಯದ ಹೊಸಲಿನ ದೆಸೆ
ನಾಳೆ ನಲಿವ ಜೀವದಾಸೆ
ಮೊಗ್ಗಿನಲ್ಲೆ ಮುಂಕ್ಕಾಗಿಸೆ
ನನ್ನುಷೆಗಿನ್ನೆಲ್ಲಿ ಉಷೆ ?
ಹೋದಳುಷೆ—ಬಂತು ನಿಶೆ !

ಸೂರೆಗೊಂಡರೆದೆಯು ಸಂತೆ !
ಉಳಿದುದಲ್ಲಿ ಶೂನ್ಯ ಬೊಂತೆ.
ನಾಳೆ ಬಾಳು ಅಂತೆ ಕಂತೆ.
ನಾನುಳಿಯುವ ಜಗವಿದಂತೆ ;
ಕತ್ತಲೆಲ್ಲ,
ಕಿರಣವಿಲ್ಲ ;
ಇದೆ ಒಲವಿನ ಹಾದಿಯಂತೆ !
ಹೋದಳುಷೆ—ಬಂತು ನಿಶೆ !

# ಬೆಳಗಾಯಿತೇಳು ಉಷೆ

ಇರುಳಿನಲ್ಲಿ ಮೊಗ್ಗಾಗಿ ಮರೆಯಾದ ಮೋಡಗಳ
ಚೆಂಗುಲಾಬಿಯ ದಳಗಳರಳುತಿವೆ, ರವಿಯುದಯು
ಎರಚುತಿರೆ ಓಕುಳಿಯನೆಲ್ಲೆಲ್ಲು ! –ಹಕ್ಕಿಗಳ
ರಾಗದುನ್ಮಾದದಲಿ, ಹಸುರು ನೆಲ ಜಗದೆದೆಯು
ಒಲವ ಹರಕೆಯು ಹೊತ್ತು ತೋರುತಿದೆ ಹನಿಗಳಲಿ !
ತಂಗಾಳಿ ಬೀರುತಿದೆ ಹಿಂದೆಂದು ಕಾಣದಿಹ
ಸುಖ ಕಂಪನೆಲ್ಲಿಂದಲೋ ಬಂದು ಕನಸಿನಲಿ
ಮುತ್ತಿಟ್ಟ ಮಾಯಾಂಗನೆಯು ತೆರದಿ ! ಆಗೊ, ವಿರಹ
ತಾಪದಲಿ ಬಿಸುಸುಯ್ವ ತೆಂಗು ಗರಿ–ತನ್ನಿಂದ
ಬಿಟ್ಟೋಡಿದಾ ಕೋಗಿಲೆಯು ಒಲವ ನೆನೆಯುತಿದೆ !
ಸುತ್ತೆಲ್ಲ ಸೌಂದರ್ಯ ತುಳುಕುತಿದೆ. ನಿನ್ನಂದ–
ನೋಟಗಳ ಸೆರೆಯಿಟ್ಟ ಕಣ್ಣವೆಯು ತೆರೆಯುತಿರೆ,
ಬೆಳಗಾಯಿತೇಳು ಉಷೆ ! ಒಲವ ಬೀರೆನ್ನೆದೆಗೆ.
ನೀನೇಳದಿರೆ ಜಗದ ಸೌಂದರ್ಯ ಅರಳುವುದೆ ?

# ಉಷೆ ಬಂದು ನಕ್ಕಾಗ

ಇರುಳಿನಾಗಸದಿಂದ ನಕ್ಷತ್ರ ನೆಲಕಿಳಿದು
ತಾವರೆಯ ಎಲೆಮೇಲೆ ನಿಂತಿತ್ತು.
ಉಷೆ ಬಂದು ನಕ್ಕಾಗ, ಹನಿಯೆಂದೆಗೆ ರಂಗಿಳಿದು
ಬಣ್ಣ ಬಣ್ಣದ ಬಯಕೆ ಹೊಳೆದಿತ್ತು !
ಉಷೆಯುಳಿವು ಮೂರೆ ಚಣ! ಮರು ನಿಮಿಷ ಜಗವನ್ನು
ಹಗಲ ಹೊದಿಕೆಯು ಬೆಳಕು ಪಸರಿಸಿತು.
ತಾವರೆಯು ತಲೆ ಮುರಿದು, ಮೇಲ್ ಕುಳಿತ ತಾರೆಯನು
ಅಡಿಯನಂತದ ನೀರೊಳುರುಳಿಸಿತು !

# ಅರೆ ಕಳೆದಿದೆ ರಾತ್ರಿ

ಜಗವೆಲ್ಲವು ಕನಸಿನ ಮಡಿಲಲಿ
ಮೋಹದಿ ಮಲಗಿದೆ—ನಾನಿನ್ನೂ
ಕಣ್ಣೀರಿನ ಹನಿಗಳನಡಗಿಸಿ,
ಉಷೆಯಂ ಹಂಬಲಿಸಿ ಎದ್ದಿರಲು,
ಅರೆ ಕಳೆದಿದೆ ರಾತ್ರಿ !

ಈ ತೀರದ ದನಿ ಮರಳಿ ಬಂದು
ಮಾರ್ದನಿಯೀಡೆ, ನಿಶಿಯೆಂದೆ ಮೌನ
ಸಿಡಿದು ಚೂರು ಚೂರಾಗಲು, ಚಂದಿರ
ಮೋಡದ ಗೋರಿಯು ಪಡೆದಿರಲು,
ಅರೆ ಕಳೆದಿದೆ ರಾತ್ರಿ !

ಶಾಂತಿ ಮೌನಗಳ ಭೀಕರ ದನಿ
ಬೆದರಿ ಬೆಚ್ಚಿಸಿರೆ ಅರೆಗನಸ—
ಅದುರಿದೆ ಎದೆದನಿ—ನೆನಪಾಗಲು
ಅಳಿದೊಲವಿನ ನೆರಳಿನ ಅಡಿ
ಅರೆ ಕಳೆದಿದೆ ರಾತ್ರಿ !

# ಮದುವೆಯಾಯಿತು ಉಷೆಗೆ

ಮದುವೆಯಾಯಿತು ಉಷೆಗೆ ಮಸಣ ಮಂಟಪದಲ್ಲಿ.
ಕೇಳಲಿಲ್ಲವೆ ಊರು, ಜನರದರ ವೈಖರಿಯು ?
ವರನ ಬಳಗವು ಬಂದು ನಿಂತಿತ್ತು, ಅಲ್ಲಲ್ಲಿ
ಹೆಜ್ಜೆ ಹೆಜ್ಜೆಗು ವಧುಗೆ ಕಾಲಕೊಡಿಟ್ಟುರೆಯು
ಮೂಳೆಯಾಭರಣಗಳ ಒಳುಂವಳಿಯು ನೀಡುತ್ತ !
ವಧುವಿನದು ಮೃದುಪಾದ ನೊಂದರಾಗದು ಎನುತ
ನಾಲ್ವರಾಕೆಯು ಕಳಿತ ಪಾಲಕಿಯನೆತ್ತುತ್ತ
ಮಂಟಪಕೆ ತಂದರದ. ದಿಬ್ಬಣಕೆ ಸಂಗೀತ
ವರನ ಬಳಗದ ನಾಯಿ ನರಿಗಳದು. ರಣಹದ್ದು
ವಹಿಸಿ ಪೌರೋಹಿತ್ಯ, ಅರ್ಪಿಸಿತು ಆಕೆಯನು
ಅಗ್ನಿಯುಡಿಯಲಿ. ಒಡನೆ ಜ್ವಾಲೆ ಬಾಹುಗಳೆದ್ದು
ಉಷೆಯನಾಲಂಗಿಸುತ ಚಪ್ಪರಿಸಿ ಕೇಕೆಯನು
ಹಾಕುತಿರೆ—ಮೋಡಗಳು ಸ್ತಬ್ಧ ಮೌನದಿ ನಿಂತು
ನೋಡಿದುವು. ಸಿಡಿದಿತ್ತು ಜೀವನದ ಕೊನೆ ತಂತು !

# ಹಗಲಿದೊ ಮುಗಿಯುತ ಬಂತು

ಸಂಧ್ಯಾ ರಾಣಿಯು ಸುಂದರ ಸ್ವಾಗತ
ನೀಡಿರಲದ ಕೈಕೊಳ್ಳಲು ಸರಿಯುತ
ಉರಿಗಣ್ಣಿನ ರವಿ ಪಶ್ಚಿಮವರಸುತ
ಕಾತರದಾತುರದಲಿ ಮುನ್ನಡೆದಿರೆ
ಹಗಲಿದೊ ಮುಗಿಯುತ ಬಂತು !

ಮನೆಯಲಿ ಮಡದಿಯು ಕಾದಿಹ ಕಾತರ
ತೊದಲು ಕಂದರಾಲಿಂಗನದಾತುರ
ಜನರೆದೆ ತುಂಬಿರೆ ದಾರಿಯು ಸರಸರ
ತುಳಿದಿವೆ ಕಾಲುಗಳವಸರದಿಂದಲಿ
ಹಗಲಿದೊ ಮುಗಿಯುತ ಬಂತು !

ಹಗಲೆಲ್ಲವು ಎದೆರಕ್ತವ ಬಸಿದಿಹ
ಬಾಳಿಗೆ ದುಡಿವವ, ಅದೊ ನಡೆಯುತಲಿಹ,
ಒಲವಿನ ಬಿಸಿಯೂಟವ ಕನವರಿಸಿಹ
ಕಾಲಿನ ಚಟಪಟ ವೇಗವೇರುತಿದೆ
ಹಗಲಿದೊ ಮುಗಿಯುತ ಬಂತು !

ಜಗ ಜವದಲಿ ನಡೆದಿದೆ ಮನೆಯೆಡೆ
ಕಂಡ ಕನಸು ನೀಡುವ ಒಲವಿನ ಎಡೆ
ಉಂಡು ನಿದ್ರಿಸುತೆ, ಸಂತಸವನು ಪಡೆ—
—ವಾಸೆಯು ಸಿಡಿತದಿ ರಾಗವೇಗದಲಿ
ಹಗಲಿದೊ ಮುಗಿಯುತ ಬಂತು !

ಹೃದಯದ ನೋವಿದೊ ಕಾಲನಡಿಗೆಯಂ
ತಡೆದಿದೆ, 'ಏತಕೆ ಸಾಗುವೆ ನೀನಂ ?
ನಿನ್ನಪೇಕ್ಷೆಯಿಲ್ಲದೊಡೆಂತಿರಲೇನಂ ?
ಇರುಳಂ ಮುಂತ್ರಿದರುಂ, ನಡೆ, ಮೆಲ್ಲನೆ ನಡೆ'
ಎನಂತಿರೆ—

ಹಗಲಿದೊ ಮುಂಗಿಯಂತ ಬಂತುಂ !

# ಕನಸಿನ ಮೋಡಿ

ಆ ನೋಟ ! ಮೃದುಮಧುರ ನೋಟವೆಲ್ಲಿಹುದು ?
ಅಂದೊಮ್ಮೆ ಮಿಂಚಿದುದು ಅಲ್ಲೆ ಅಳಿದಿಹುದು ;
    ಹುಚ್ಚು ಕನಸಿನಲಾದರು
    ಮತ್ತೆ ಹೃದಯವ ಸೇರದು !
ಮತ್ತೊಮ್ಮೆ ಪಡೆಯುವೆನೆ ?—ಮತ್ತೆ ಬಾರದದು.
ಮೇಲ್ವಾಯ್ದ ಜ್ವಾಲೆಯೊಲು ಸಾಗಿ ಹೋಗಿಹುದು !

ಕಾಲನದಿ ಸಾಗುತಿರೆ ದಡದಲ್ಲಿ ಕೂತು
ಛಾಯೆಯಂದದಿ ಕನಸು ಮೌನದಲಿ ಹೂತು
    ಕಳೆದ ದಿನಗಳ ನನಸಲಿ
    ಕೊರಗೆ ತುಂಬಿದೆ ಕಂಬನಿ !
ಮೇಲೆ ಅರಚಣಕಾಗಿ ಕಾಮಧನು ಮೂಡಿ
ಮಾಯವಾದಂತೆ, ಉಷೆ, ಕನಸ ಮೋಡಿ !

# ಉಷೆಯೆನ್ನ ಬಾಳ ನಗೆ

ಬಲಂ ಕಾಲ ಸಂತ್ರುತಲಿ ಬಳಲಿದೆನಂ
ಬಲಂ ದೂರ ಬಂದಿಹೆನಂ
ಎಡಹಿದೆನಂ ಎನಿತೆನಿತೊ ದಾರಿಯಂಲಿ
ಕೊನೆಗಿಲ್ಲಿ ನಿಂದಿಹೆನಂ !

ನಾಳೆ ಬಾಳೆಂತಹಂದೊ ಅರಿಯೆನದ
ಇಂದೊಂದೆ ನಿಜವೆನಗೆ ;
ಅದನೆನಗೆ ತೋರಿಸಂತ ಬೆಳಗಿಸಿದ
ಉಷೆಯೆನ್ನ ಬಾಳ ನಗೆ !

# ಆ ಕಾಲ ಅಳಿದಿಹುದು

ಆ ಕಾಲ ಅಳಿದಿಹುದು, ಮತ್ತೆ ಬಾರದು, ಮಗುವೆ.
ಮುಳುಗಿಹುದು. ಮಂಜಾಗಿ ಚಿರಕು ಅಳಿದಿಹುದು.
ನಿನ್ನೆಯೆಡೆ ನೋಡುವೆವು
ಎದೆಗೆಟ್ಟು ಕಾಣುವೆವು—
ನಾನು ನೀನೂ ಕೂಡಿ—ಜೀವಕಾರ್ನದಿಯೊಳಗೆ
ಕಂಡ ಕನಸಾಸೆಗಳ ಮುರುಕು ರೂಪಗಳು
ಕಂಗೆಟ್ಟು, ಮಂಜಿಟ್ಟು ಮಸುಕಿನಲಿ ಮುಳುಗಿಹುದು !

ನಾವೀರ್ವರೂ ಅಂದು ಕಂಡ ತೊರೆ ಹರಿಯುತಿದೆ.
ಅದರಲೆಗಳೆಂದಿಗೂ ಹಿಂದಿರುಗದಿಹವು !
ನಾವಿಲ್ಲಿ ಉಳಿದಿಹೆವು
ನೋವ ನಾಡಿನೊಳಿಹೆವು,
ಜೀವನದ ಮುಂಜಾನೆ ನಸುಬೆಳಕು ಬೀಳುತಿರೆ
ಮಾಸಿ ಮಾಯುವನಡೆವ ಇರುಳಿನೊಲವಿನ ಆಸೆ
ನೆನಪನುಳಿಸಲು ಉಳಿದ ಗೋರಿಗಳ ಹಾಗಿಹೆವು !

(ಆಧಾರ)
*Shelley : That time is dead forever, child*

## ಇರುಳಾಗಲೆ ಕವಿದಿದೆ ಗೆಳತಿ

ದಾರಿಯುಂ ಇನಿತಾದರುಂ ಕಳೆದಿಲ್ಲ,
ದೂರದ ಊರಿನ ಸುಳಿವೇ ಇಲ್ಲ,
ಹಸುರುಂ ಬಯಲುಂಗಳೊ ಬಾಳಿನೊಳಿಲ್ಲ,
ಇರುಳಾಗಲೆ ಕವಿದಿದೆ, ಗೆಳತಿ !

ರವಿ ಮುಳುಗಿದನದೊ ದುಗುಡದ ಕಡಲಲಿ,
ಮೋಡದ ದಿಬ್ಬಣ ಆಗಸದೊಡಲಲಿ
ಅಬ್ಬರಿಸಿದೆ, ಭಯಂ ತುಂಬುತ ಸಿಡಿಲಲಿ
ಇರುಳಾಗಲೆ ಕವಿದಿದೆ, ಗೆಳತಿ !

ಇರುಳಿತ್ತಿದೆ ಮರುಳಿನ ಆಹ್ವಾನ,
ದೂರದಿ ಒರಲಿದೆ ಯಾವುದೊ ಶ್ವಾನ,
ಮರಮರ ಮರುಗಿದೆ ತರಗೆಲೆ ತಾನ,
ಇರುಳಾಗಲೆ ಕವಿದಿದೆ, ಗೆಳತಿ !

ಕಾಲು ತೊಡರುತಿದೆ, ಮುನ್ನಡೆಯುವ ದೆಸೆ
ದಿಕ್ಕುಗಾಣದೆಯೆ ನಾಳಿನ ಭರವಸೆ
ಬಿಕ್ಕಿ ಅಳುತಲಿರೆ, ಚಿರದುಃಖದ ಹಸೆ
ಇರುಳಾಗಲೆ ಕವಿದಿದೆ, ಗೆಳತಿ !

ದಾರಿ ತಪ್ಪಿಹುದುಂ, ನೀನೆಲ್ಲಿಯೊ ನಡೆದೆ.
ಹಾಳು ಅಪ್ಪಿಹುದು, ನಾನಿಲ್ಲಿಯೆ ಉಳಿದೆ.
ಗೋಳುಂ ಒಪ್ಪಿಹುದುಂ, ಬಾಳು ನನ್ನದಿದೆ.
ಇರುಳಾಗಲೆ ಕವಿದಿದೆ, ಗೆಳತಿ !

# ನೋಡು ಉಷೆ

ನೋಡು ಉಷೆ ! ಸುತ್ತೆಲ್ಲ ಬೆಡಗುಂ ಸೂಸಿದೆ ತುಂಬಿ,
ಚಂದ್ರಮನ ಎಳಗಿರಣಗಳ ತೋಳತೆಕ್ಕೆಯಲಿ
ಮುದ್ದು ಮೋಡವು ನಕ್ಕು ನಲಿಯುತಿರೆ, ಮರಿದುಂಬಿ
ಹೂಹೃದಯದೊಲವಿನಲಿ ಕುಣಿದಾಡುವಂದದಲಿ !
ತಂಗಾಳಿ ಮರದೆಲೆಯಂ ಮುಟ್ಟಿಯೂ ಮುಟ್ಟದೊಲು,
ಮೃದುವಾಗಿ ಮುತ್ತಿಟ್ಟು, ಮುಂದೆ ಸಾಗುತ್ತಲಿದೆ.
ಆ ಗಿರಿಯ ಶಿಖರವನು ಬಾಚಿ ತಬ್ಬಿದ ಹೊನಲು
ಬೆಳ್ಳಿ ಬೆಳಕಿನ ಒಲವು ಪಿಸುನಗೆಯ ಬೀರುತಿದೆ !
ಎಲ್ಲೆಡೆಯು ಹಿರಿ ಬೆಡಗು. ಇಲ್ಲಿ ನೀ ಸುಖದ ಸಿರಿ !
ಹೃದಯ ಕಂಗಳಲಿರಿಸಿ, ಕಂಗಳನೆ ಮನೆಮಾಡಿ
ಅದರೊಳಿರು ಬಾರೆಂದು ಕರೆಯುತಿಹೆ ಮಿಂಚುಮರಿ !
ಈ ರಾತ್ರಿ ಪ್ರೇಮಿಗಳ ಮಿಲನದೊಲವಿನ ಮೋಡಿ
ಹಾಸುತಿದೆ; ಬಾ ಬಳಿಗೆ. ಇರ್ವರೊಂದಾಗೋಣ,
ನಾಳೆ ನಿನ್ನೆಗಳಳಲ ದೂರ ದೂರಿರಿಸೋಣ !

# ಮುರುಕು ಮಂಟಪ

ಮುರುಕು ಮಂಟಪದಲ್ಲಿ ಅಳಿದುಳಿದ ಎಡೆಯಲ್ಲಿ
ನಿನ್ನ ರೂಪವು ಬಂದು, ಕಳೆದ ಕಾಲದ ನನಸ
ಕೂಡ ಆಡುತಲಿಹುದು ಕಣ್ಣಮುಚ್ಚಾಲೆ !
ಬೇಡ ಬೇಡೆಂದರೂ, ಕೇಳದೆಯೆ, ತಾಳದೆಯೆ,
ಓಡುತಿದೆ ನಿನ್ನೆಡೆಗೆ ಮನಸು, ಕನಸಿನ ನನಸು,
ಮರೆಯಾದ ನಿನಗಾಗಿ ತವಕಪಡುತೆ !

ಅಂದೊಮ್ಮೆ, ಹಿಂದೆ, ನನ್ನೆದೆಯು ಒಲವಿನರವದಿ
ನಿನ್ನೆದೆಗೆ ಪಿಸುಮಾತ ಕಳುಹಿಸಿತು, ನೀ ಕೇಳಿ
ನನ್ನೆದೆಗೆ ಸುಳಿವೆಯೆಂದೆನುವ ಹಿಗ್ಗಿನಲಿ.
ಆ ಮಾತು, ನನ್ನ ಉಷೆ, ನಿನ್ನೆದೆಯ ಒಳಸಾರೆ
ನೀ ಬಂದೆ ! ಅನಿತರಲೆ ಕಾರಿರುಳು ಇಳಿದಿಳಿದು
ನಿನ್ನನಾವರಿಸಿತ್ತು ! ಉಳಿದುದೇನು ?

ಒಲವಿನರಮನೆ ಮುರಿದು
ಮುರುಕು ಮಂಟಪವಾಯ್ತು
ಒಳಗೆಲ್ಲ ಬರಿ ಬರಿದು—
ನೋವಿಗದೆ ಆಟಕಾಯ್ತು !

# ಆ ಸಮುದ್ರದಾಚೆಯಲ್ಲಿ

ಆ ಸಮುದ್ರದಾಚೆಯಲ್ಲಿ
ಮುಗಿಲು ನೆಲವ ಕೂಡುವಲ್ಲಿ
ಹಿರಿಯಲೆಗಳ ಮಡಿಲಿನಲ್ಲಿ
ದೀಪವೊಂದಿದೆ
ನಿನ್ನ—ಜೀವವಲ್ಲಿದೆ !

ನೆಲವಾಗಸ ಸೇರುವಂತೆ
ನಮ್ಮಿಬ್ಬರ ಒಲವಿನ ಜತೆ
ಆ ಕೊನೆಯಲಿ ಒಂದೆ ಅಂತೆ
ನನ್ನ ಕನಸದು
ಬರಿಯ—ಹೊನ್ನ ಕನಸದು !

ಅಂತು ಅಂದು ನಿನ್ನ ಜೀವ
—ನನ್ನ ಹೃದಯದೊಂದು ಭಾವ—
ನೋವನಿತ್ತು ಜಗದ ಸಾವ
ಉಡಿಗೆ ಮರಳಿತು
ನನ್ನ—ಕನಸು ಉರುಳಿತು.

ನಿನ್ನ ಕೂಡುವಾಸೆಯಿಂದೆ
ನನ್ನೆದೆ ಕಿರುದೋಣಿಯೊಂದೆ
ಮುಂದೆ ಸಾಗೆ, ಮುಗಿಲು ಮುಂದೆ
ಮುಂದೆ ಸಾಗಿದೆ
ನಿನ್ನ ನೆಲೆಯು ತೋರದೆ !

ಇಂತಿರಲೆದೆಗೇನಂ ಗತಿ ?
ಮುಂದೆ ಸಾಗಲೇನಂ ಪ್ರತಿ ?
ಕಳೆವುದಿಲ್ಲ ಜಗದ ಮಿಂತಿ ?
—ಹೃದಯ ಬಿರಿದಿದೆ
ನನ್ನ—ದೋಣಿ ಮುಳುಗಿದೆ !

# ಒಂದೆ ಒಲವು

ತೋಟದಲಿ ಬಳುಕುತಿಹ ಬಳ್ಳಿಯೊಳಗರಳುತಿಹ
ಎಳೆಮೊಗ್ಗುಗಳಲೊಂದ ಚಿವುಟಿ ಕೈಯಲಿ ಹಿಡಿದು
ಹಸುಗೂಸ ಹಾಲ್ಕೆನ್ನೆಯಂತೆ ಮಿದುವಾಗಿರುವ
ದಳಗಳನು ಕೆನ್ನೆಗಳಿಗೊತ್ತಿಕೊಂಡೆ !

ಗಳಿಗೆಗಳು ಉರುಳಿದುವು. ಕಾವಿನಲಿ ಎಳೆಮೊಗ್ಗು
ಬಸವಳಿದು ಬಾಡುತಲಿ ನಿರ್ಜೀವ ತರಗಾಯ್ತು.
ಹೃದಯದೊಳಕೊರಗಿನಲಿ ಕಂಗಳಲಿ ಹನಿಯುಳಿದು
ಬಾಡಿದರಳಿಗೆ ನೀರನೆರೆದೆನಾಗ !

ಕಂದನನು ಕಳೆದೊಲವ ತಾಯಿ ಹೆಣ್ಣನ ಹಾಗೆ
ಮಲ್ಲಿಗೆಯ ಬಳ್ಳಿಗಳು ಕುಗ್ಗಿ ತಲೆ ತಗ್ಗಿಸಲು
ಎಲೆಗಳೆಲ್ಲವು ಮೌನ ! ಸುಳಿವಿಲ್ಲ ಗಾಳಿಯದು !
ಎದೆಯೊಡೆದು ಸಿಡಿದಿತ್ತು ಮೊಗ್ಗಿಗಾಗಿ !

ಆಗೆನಗೆ ಅರಿವಾಯ್ತು ಬಾಳ ಬಾನಿನ ಹಿಂದೆ
ಅರಳಿರುವ ಹೂವಿನೆದೆ ! ಬಳ್ಳಿಯಲಿ ತಾಯಾಗಿ,
ಮೊಗ್ಗಿನಲಿ ಮಗುವಾಗಿ, ಎಲೆಗಳಲಿ ಕುಲವಾಗಿ,
ಎಲ್ಲವನು ಆಳುವುದು ಒಂದೆ ಒಲವು !

—

# ಬೆಳಗು ನನ್ನ ಉಷೆ

ಸುಖದುಃಖಗಳ ನಡುವೆ ಸಿಕ್ಕಿ ಸಂತಾಪದಲಿ
ಕಾವಿನಲಿ ಬೇಯುತಿದೆ ನನ್ನ ಬಾಳು ;
ಇದನೆಲ್ಲ ಮರೆಸುತ್ತ ಒಲವ ಬೆಳಕಿನಲೆನ್ನ
ಹೃದಯವನು ಅರಳಿಸುತ ಬೆಳಗು, ನನ್ನ ಉಷೆ !

ಬಾಳ ಭೀಕರ ಇರುಳ ಕಾತರದಿ ಕೂಗಿದೆನು
ಹೃದಯ ಬರಿದಾಗಿಹುದು—ಮಂಜು ನಂಜು
ಜೀವ ಹಿಂಡುತಲಿ ಹಂವು ! ಹೊರಗೆಲ್ಲ ಹಗಲಾಗಿ
ಗವಿಯೊಳಗೆ ಇರುಳಂತೆ ! ಅಂತೆ ನನ್ನೊಲವು !

ಚಂಚಲತೆ ಚಪಲತೆಯು ಹೊಂಚಿ ಹೊತ್ತಿಸಿ ಹಿಡಿದು
ತಾರೆಯೊಲು ಬೆಳಗುವೊಲು ಕವಿಯ ಕಾವ್ಯ,
ನನ್ನೊಲವ ನಡುನೀರಿನೊಳಮುತ್ತ ಹೊರಗೆತ್ತಿ
ಅದರೊಳಗ ಕಿರು ಪ್ರಣತಿ ಬೆಳಗು ನನ್ನ ಉಷೆ !

# ಇನ್ನೆಲ್ಲಿ ಬಾಳಿನುಷೆ ?

ನಾಲ್ಕು ದಿನಗಳ ಕಾಲ ಬೇರೆಯೂರಿಗೆ ಸಾಗಿ
ನಿನ್ನ ಕನಸನು ಮರೆತು ನನ್ನಂತೆ ನಾನಿದ್ದು
ಮತ್ತೆ ಹಿಂದಿರುಗುವೆನು, ಅಗಲಿಕೆಯ ದಿನಗಳಲಿ
ಇನಿತಾದರೂ ನಿನ್ನ ನೆನಪುಗಳು ಭುಗಿಲೆದ್ದು
ಮನವ ಕೆರಳಿಸದಿರಲಿ, ವಿರಹ ಮಾಡಲಿ ನಿದ್ದೆ !
ಮೌನ ಮಸಣದಲೆನ್ನ ಮನದಳಲ ಮಣ್ಣಿಟ್ಟು,
ಬಾಳಿನುಷೆಯನು ಬಲಿಯಕೊಂಡ ಕ್ರೂರತೆ ಮುದ್ದೆ
ದೈವವನು ಮರೆಯುವೆನು, ನೆಲದಲ್ಲಿ ಹೂಳಿಟ್ಟು !
ಎಂದು ಚಿಂತಿಸುತಾನು ಸಾಗುತಿರಲಾ ಎಡೆಗೆ
ಸಂಜೆಯಾಗಸದಲ್ಲಿ ಒಂದೆ ತಾರಕೆಯುರಳಿ,
ಮುಗಿಲ ಮೋಡದ ಹಣೆಗೆ ಬಾಸಿಂಗವಿಟ್ಟಂತೆ
ಹೊಳೆಯುತಿರೆ, ಹೃದಯದಲಿ ನಿನ್ನ ಕನಸೇ ಕೆರಳಿ
ಮನವನಳಲಿಸುತಿಹುದು. ಹೃದಯದೊಲವಿನ ಆಸೆ
ನಿಟ್ಟುಸಿರೊಳುಸುರುತಿದೆ—ಇನ್ನೆಲ್ಲಿ ಬಾಳಿನುಷೆ ?

# ಮಲಗು ಮಲಗೆನ್ನೆದೆಯ
# ಮಂಟಪದ ಮೂರ್ತಿ

ಮಲಗು ಮಲಗೆನ್ನೆದೆಯ ಮಂಟಪದ ಮೂರ್ತಿ
ಮುಗಿಲಿನಲಿ ಮೋಡಗಳು ಕೂಡುತಿವೆ ಭರದಿ !

ಜಗದ ಕೊನೆಯುಗಂ ತಂದ ದೂತರಂತೆ
ಪ್ರಳಯ ರುದ್ರನ ಅಂಶ ತಾಳ್ದರಂತೆ
ಗುಡುಗು ಸಿಡಿಲುಗಳೆರಗಿ ಜಗವ ನಡುಗಿಸುತಿಹುವು.
ನೀನೇಳಬೇಡ, ಮಗು, ಉಷೆಯೆ, ಮಲಗಿನ್ನು !

ನಾಳೆಯೆಂತೋ ಏನೊ ಎಂಬುದೇತಕೆ ಚಿಂತೆ ?
ಬಾಳು ಎಂತೋ ಏಕೊ, ಬರಿಯ ಬಯಕೆಯ ಬೊಂತೆ !
ನಂದುತಿಹ ನನ್ನೆದೆಯ ನೋವ ನೀ ಕಾಣದಿರು ;
ಈಗೇಳಬೇಡ, ಮಗು, ಉಷೆಯೆ, ಮಲಗಿನ್ನು !

ಹೊಂಗನಸುಗಳು ಬಂದು ನಿನ್ನ ಮುತ್ತಿಡುತಿರಲಿ,
ಆ ಮುತ್ತುಗಳಲೆನ್ನ ಮುತ್ತು ಮಾಸದೆ ಇರಲಿ,
ಈ ಜಗದ ಕ್ರೂರತೆಯು ನನಸದನು ತಾಗದೊಲು
ಏಳದಿರು ಮುದ್ದು ಮಗು, ಉಷೆಯೆ, ಮಲಗಿನ್ನು !

ನಾನಿನ್ನ ಜಗದೊಳಗೆ ಮುಂದೊಮ್ಮೆ ಬಂದಾಗ
ನಿನ್ನೊಲವ ಬೆಳಕ ರವಿ ಹೃದಯದಲಿ ಸುಳಿದಾಗ
ನೀನೇಳು ನನ್ನ ಮಣಿ, ಎದೆಯ ಹಗಲಿನ ರಾಗ.
ಆಗ ಕಣ್ತೆರೆ ಈಗ, ಉಷೆಯೆ, ಮಲಗಿನ್ನು !

# ನೀನಾರು

ನೀನಾರು, ಎಲ್ಲಿಂದ ಬಂದಿರುವೆ, ಚೆಲುವೆ ?
ನನ್ನ ಮೈಮನವೆಲ್ಲ ಸೂರೆಗೊಂಡಿರುವೆ !
ತುಟಿಯು ಮೊಗ್ಗಿನಲಾವ ಮುತ್ತು ಮುಚ್ಚಿಟ್ಟಿರುಪೆ,
ಅರೆಬಿರಿದ ನಗೆಯೊಳಗೆ ಯಾವ ರಸಕಂಬಿಹುದು ?
ಚಪಲ ಚಂಚಲ ಬೊಗಸೆ ಕಣ್ಣುಗಳ ಬಿಚ್ಚುವೆಪೆ
ಕಡಲ ನೀಲಾಳದಂತಾವುದನು ಮುಚ್ಚಿಹುವು !
ಗಾಳಿಸೆರಗಿನ ಮೋಡದಂತೆ ಮುಸುಕಾಡುತಿಹ
ಎದೆಯೊಳಗೆ ಯಾವ ಸೆಳೆ ಮಿಂಚ ತುಂಬಿರುವೆ ?
ಬಾನಬಿಲ್ಲನು ತಂದು ಮೌನದಲಿ ಮನೆ ಮೇಲೆ
ಮೂಡಿಸಿದ ಮನ ತಳೆದ ಸವಿಭಾವವಾಗಿರುವೆ !
ವೇದನೆಯು, ಮೋದನೆಯು, ಆಮೋದ, ಸಾಧನೆಯು
ರಸಚೆಲುವು ಭಾವಗಳ ಮಧುರಸಿರಿ ನೀನು !
ಯಾವ ಭಾಗ್ಯವೊ ತೂರಿ ಹಗಲಿನೆಳಬೆಳಕಗರಿ
ಹಾಯಿ ದೋಣಿಯು ಸೇರಿ ನನ್ನೆದೆಗೆ ಸುಳಿದಿರುವೆ !

# ಹೃದಯ ಒಲವಿಗೆ ಅಲ್ಲದಿನ್ನೇತಕೆ ?

ಹೃದಯ ಒಲಪಿಗೆ ಅಲ್ಲದಿನ್ನೇತಕೆ ?
　　ಬಾನಿನಲಿ ತಾರೆಗಳ ಮಾಲೆಯೇಕೆ ?

ಆ ಮೂರು ಮೋಡಗಳ ನಡುವೆ ಚೆಂಡಿನ ಹಾಗೆ
　　ಕೇಸರಿಯ ಕಿರಣಗಳ ಮಂಜ ಮೇಲೆ
ಹರಹಂತ್ತ ಏರಂತಿಹ ಚಂದಿರನ ಬೆಳ್ಳಿಯಲಿ
　　ನೀ ಬಾರದಿರೆ ನನ್ನ ಹಾಡಿದೇಕೆ ?

ಓ ನನ್ನ ಉಷೆ, ನಿನ್ನ 'ಓ' ದನಿಯೆ ಕೇಳದಿದೆ,
　　ಎನಿತೆನಿತಂ ಕೂಗಿದರು ಬಾರೆಯೇಕೆ ?
ನನ್ನ ನಿನ್ನೊಲವಿಂದ ಒಂದೆ ಬಾಳಿನ ಚಂದ
　　ಜಗಕೆ ತೋರುವ ಎನಲು, ಮುನಿವುದೇಕೆ ?

ಮೋಡಗಳ ಮೈಯಿಳಿದು, ಮಳೆಯಿಳಿದು, ಮುಗಿದಾಗ.
　　ಹೂಗಿರಣ ಅರಳುವುದು ಜನದೊಳೇಕೆ ?
ಎಲೆಯ ಕುಣಿತದ ತಾಳ, ಮುಂಜು ಹನಿಗಳ ಮೇಳ,
　　ಗಾಳಿಯಿಂಪಿನ ಗೀತ ಸುಳಿವುದೇಕೆ ?

ಜೀವನದ ನಗೆ ನೀನು, ನಗೆಯೊಳನಗೆ ನೀನು,
　　ನೀ ಬಾರದಿರೆ ಎಲ್ಲ ನಗೆಯಿದೇಕೆ ?
ಕಲ್ಪನೆಯ ಬಿಸಿಯಲ್ಲಿ ಸುಳಿದೊಂದು ಕನಸಂತೆ
　　ನೀ ತೋರದಿರೆ ನನ್ನ ಬಾಳಿದೇಕೆ ?

# ನೀವು ಹೆಂಗಸರಂತು ಎಳೆಯ ಮಕ್ಕಳ ಹಾಗೆ

ನೀವು ಹೆಂಗಸರಂತು ಎಳೆಯ ಮಕ್ಕಳ ಹಾಗೆ
ಹಿಡಿದ ಹಟವನು ಬಿಡದೆ, ಬಯಸಿದುದಂ ದೊರೆವನಕ
ಕಾಡುವುದು, ಮುನಿಯುವುದು. ಬಯಸಿದುದಂ, ದೊರಕಿದೊಡೆ
ಹಿಗ್ಗಿಗೆಣೆಯೇ ಇಲ್ಲ. ಕುಣಿ ಕುಣಿದು ಆಡುತ್ತ
ನಿಮ್ಮನೇ ಮೈಮರೆತು ನವಿಲಂತೆ ನಲಿಯುವಿರಿ.
ನಿಮ್ಮದಾದುದ ಮತ್ತೆ, ಎಲ್ಲರಿಗು ತೋರುತ್ತ
ಹೊಗಳಿಕೆಯ ಹೊಂನೋಣ, ಎನುವ ಒಳ ಆಸೆಯಲಿ
ಎಲ್ಲೆಲ್ಲು ಮೆರೆಯುವಿರಿ ಹೆಣ್ತನದ ಎಳ ಚಪಲ !

ನೀನಂದು ಹೊಸ ಸೀರೆ—ಬಿಳಿಯ ಖಾದಿಯ ಸೀರೆ,
ಕೆಂಪು ರಂಗಿನದಂಚು, ಅಂಚಿನಲಿ ಬಿಡಿಸಿರುವ
ಹೂಗಳನು ಮುತ್ತಿಡಲು, ಹೊಂಚುತಿಹ ದುಂಬಿ ಗಣ—
ಉಟ್ಟು ಮೇಲಕೆ ವಿವಿಧ ಹೂರಂಗಿನಾ ರವಿಕೆ
ತೊಟ್ಟು ಮೆರೆಯುತ ಬರಲು, ನಿನ್ನ ಹಿಗ್ಗಿನಲೆನ್ನ
ಮಾತಂಗಳು ಮುಂತ್ತಾಯ್ತು, ಮೌನ ಒಲವಿಗೆ ಚೆನ್ನ !

# ಹೊಸ ವರ್ಷವು ಬಂದಿದೆ, ಗೆಳತಿ

ಹಳೆಯ ವರ್ಷವಿಂದಳಿಯಿತು, ಗೆಳತಿ.
ಅದರೊಡಲಿನ ಸುಖದುಃಖದ ಪ್ರಣತಿ
ಆರಿತು, ಹೊಸ ವರ್ಷಕೆ ಆರತಿ
ನೀಡಿ, ಸ್ವಾಗತಿಪ, ಬಾ, ಗೆಳತಿ.
ಹೊಸ ವರ್ಷವು ಬಂದಿದೆ, ಗೆಳತಿ !

ಯುಗ ಕಳೆಯಿತು, ಬಾಳಿದೆಯೊಳ ಪ್ರೀತಿ
ಆಸೆ ಅಡಗಿದಭಿಲಾಷೆಯನ್ನೆಲ್ಲ
ಮಣ್ಣು ಮಾಡುವುದೆ ಹೊಸದರ ನೀತಿ.
ಬಾಹು ನೀಡಿ ಬರಸೆಳೆಯುವೆವೆಲ್ಲ !
ಹೊಸ ವರ್ಷವು ಬಂದಿದೆ, ಗೆಳತಿ !

ನೋಡು, ಬಂದಿರುವ ಹೊಸ ವರ್ಷದ ರವ
ತಂದಿದೆ ಹೊಸ ದುಗುಡದ ಪ್ರಣತಿ ;
ಅದರ ನೆರಳಿನಲಿ ಜೀವನವೆಲ್ಲವ
ದುಃಖಾದರ್ಶವನೆಸಗುವ ಗೆಳತಿ !
ಹೊಸ ವರ್ಷವು ಬಂದಿದೆ, ಗೆಳತಿ !

# ಜೀವನದ ರೂಪನ್ನೆ ಬದಲಿಸುವ, ಬಾ !

ಕೈಯ ಕೈಯಲಿ ಇಟ್ಟು
ಕಣ್ಣ ಕಣ್ಣಲಿ ನಟ್ಟು
ಮುಂದಕ್ಕೆ ಸಾಗೋಣ, ನೋಡೋಣ ಬಾ ;
ನಾನು ನೀನೂ ಕೂಡಿ
ವಿಧಿಯೊಡನೆ ಹೆಣಗಾಡಿ
ಜೀವನದ ರೂಪನ್ನೆ ಬದಲಿಸುವ, ಬಾ !

ನದಿಯ ತಣ್ಣುಡಿ ಮೇಲೆ
ಶಶಿಯ ಒಲವಿನ ಓಲೆ
ಕೋರೈಸಿ ಕುಣಿವುದನು ಓದೋಣ ಬಾ ;
ಬಾಳಿನಂಗಳದಲ್ಲಿ
ಸಾವ ಪಂಜರದಲ್ಲಿ
ಅಳಿದುಳಿದ ಕುಲವನ್ನು ಕಾಣೋಣ, ಬಾ !

ನಾದ ಸುತ್ತಲು ಸುತ್ತಿ
ಹಾಡ ಮಿಂಚಿನ ಕತ್ತಿ
ರೞಳಪಿಸುತ ಇರುಳನ್ನು ಇರಿಯೋಣ ಬಾ ;
ನಾನು ನೀನೂ ಕೂಡಿ
ಜೀವನವ ಜಾಲಾಡಿ
ಹುದುಗಿರುವ ಮುತ್ತನ್ನು ಆಯೋಣ, ಬಾ !

ಸಿರಿಯು ಸಂತಸ ಕೂಟ,
ಹೊರೆಯು ಸಿಂಗರ ಮಾಟ,
ಮರೆಯ ಹೆಣ್ಣಿನ ಬೇಟ, ಕಾಣೋಣ ಬಾ ;

ಅದಕೆ ಜೀವವ ತೆತ್ತ
ಲೆಕ್ಕವಿಲ್ಲದ ಮೊತ್ತ
ಜನರ ಜೀವನವನ್ನು ಎಣಿಸೋಣ, ಬಾ !

ನಾಡ ಬಿಡುಗಡೆಗಾಗಿ
ಓಡ ಅರಳುಂಗಳಾಗಿ
ಬಾಡಿರುವ ಹೂಗಳನು ಆಯೋಣ ಬಾ
ಅವರ ಜೀವದ ನಾಡಿ
ಸಿಡಿಲ ನದಿಗಳ ಕೋಡಿ
ಕೊಚ್ಚಿಸುತ, ಕ್ರಾಂತಿಯನು ಹರಡೋಣ, ಬಾ !

ಜಗವೆ ತನ್ನದು ಎಂದು,
ಕದ್ದು ಎಲ್ಲವ ತಂದು
ಕೂಡಿಟ್ಟ ಕಳ್ಳನನು ಅಳಿಸೋಣ ಬಾ ;
ತನ್ನ ಬಾಳ್ವೆಯ ತೆತ್ತು,
ತಾನೆ ಉಳಿದರ ತೊತ್ತು
ಆಗಿ ಅಳಿಯುವ ಜೀವ—ಉಳಿಸೋಣ, ಬಾ !

ಅವರ ಕೊನೆಯಿದು ಅಲ್ಲ,
ಇದು ಬರಿಯ ಉರಿಯಲ್ಲ,
ನಾಡಿನೆದೆಗಿಚ್ಚೆಂದು ಅರಿಯೋಣ ಬಾ ;
ನಾನು ನೀನೂ ಕೂಡಿ
ಒಲವ ಹಾಡನು ಹಾಡಿ
ಜೀವನದ ರೂಪನ್ನೆ, ಬದಲಿಸುವ ಬಾ !

# ಹೃದಯದಲಿ ಕೂಡಿಯಾಡುವ ಹೋಳಿ

ಮರಗಳೆಲೆಗಳ ನಡುವೆ ತೂರಿ, ಅಲೆಗಳ ಮೇಲೆ
ಬೆಳ್ಳಿಯೊರಕವ ಹೊಯ್ದು ಚಂದಿರನ ಬೆಳಕಿನಲಿ
ತೊರೆಯು ಹೃದಯವು ಅರಳಿ, ಚಿಮ್ಮಿ, ಕುಣಿಯುವಹಾಗೆ
ಮನಸು ಕುಣಿಯುತಲಿಹುದು ನಿನ್ನ ನುಡಿ ನನಸಿನಲಿ
ನಾ ಮುಂದೆ ಸಾಗುತಿರೆ! ಹಿಗ್ಗಿನಲಿ ಕುಣಿಯುತ್ತ,
ನಿನ್ನ ಕಂಡೊಡನೆನ್ನ ಮನದೆಲ್ಲ ಹೇಳುವೆನು
ಎನುವ ಕಾತರಭರಿತ ಆಸೆ ಹೃದಯದ ಸುತ್ತ
ತನ್ನ ಬಲೆ ನೇಯುತಿದೆ, ಉಳಿದೆಲ್ಲ ಮರೆತಿಹೆನು!

ನಿನ್ನ ಹುಸಿಮುನಿಸಿನಲಿ, ನನ್ನ ನುಡಿ ಮರೆಯಾಗೆ,
ಮೌನದಲಿ ಮನದೊಲವು ಮುದುಡಿ, ಮರುಗುತಲಿಹುದು,
ರಂಗು ರಂಗಿನ ಮೋಡ ರವಿಯು ಮುನಿಸಿನಲಿರಲು
ಮೆಲ್ಲ ಮೆಲ್ಲನೆ ದೂರ ಹಾರುವೊಲು ಹಾರುತಿದೆ.
ನನ್ನೊಡನೆ ಮುನಿಯುವರೆ ?—ಹುಚ್ಚಿ! ಬಾರೆನ್ನ ಗಿಳಿ!
ಒಲವಿನುಷೆ—ಹೃದಯದಲಿ ಕೂಡಿಯಾಡುವ ಹೋಳಿ!

# ನಸು ಬೆಳಕಲಿ ಮುತ್ತಿತು ಚಂದ್ರನ ರಾಹು

ತಾರೆಯ ಚಿತ್ತಾರದ ಇರುಳಿನ ಹಸೆ,
ಕನಸಿನ ಆರತಿ, ಆನಂದದ ದೆಸೆ
ಕಳೆಯುತ ಕೂಡಿರೆ ಕಾಲದ ಉಡಿ ಕಿಸೆ,
ನಸುಬೆಳಕಲಿ ಮುತ್ತಿತು ಚಂದ್ರನ ರಾಹು !

ಹಗಲುದಯಕೆ ಕೈದಾಳವನುರುಳಿಸಿ,
ಇರುಳಿನಳಿವಿಗೆದೆ ರಕ್ತವ ಹೊರಳಿಸಿ,
ದುಗುಡದ ಮೋಡದ ಕೆಂಪೆದೆ ಕೆರಳಿಸಿ,
ನಸುಬೆಳಕಲಿ ಮುತ್ತಿತು ಚಂದ್ರನ ರಾಹು !

ನಕ್ಕು ನಲಿಸಿ ನಗೆ ಹೊನಲನು ಸೂಸುವ
ಎಳ ಕೂಸಿನ ಮುಖ ಸೊಗಸನು ಕಲಸುವ
ವಿಕೃತ ಸಿಡುಬಿನಂದದಿ ಕರಿಯೂಡುವ
ನಸುಬೆಳಕಲಿ ಮುತ್ತಿತು ಚಂದ್ರನ ರಾಹು!

ಗೆಳತಿ, ಕಾಣೆ ನೀನಿದರೊಳ ರೀತಿ !
ಇದೊ ಚಂದಿರಗಿಂದೊದಗಿದ ದುರ್ಗತಿ
ಒಲವಿಗೆ ಬಳುವಳಿ ಜಗವೀಯುವ ಪ್ರತಿ!
ನಸು ಸೊಗಸಲೆ ಕೊಲುವುದು ಒಲವನು ರಾಹು !

# ಸ್ವರ್ಗದಲಿ ದೇವ ನಗುತಿಹನೇನು ?

ಯಾರ ನುಡಿಗಳ ಸೋಂಕು ಸುಳಿದೊಡನೆಯೇ ಮನದ
ಮೈದಾನದಲಿ ಬಾಳ ನಿಂತು ವಸಂತದ ಸುಗ್ಗಿ
ಎಳೆಯಾಸೆಗಳ ಚಿಗುರ ತಂದು, ಒಲವಿನ ಹಸದ
ಇದೊ ಎಂದು ಪಿಸುಗುಡಲು, ಜೀವನವು ಹಿರಿ ಹಿಗ್ಗಿ
ನಲಿದಿತ್ತೊ, ಆಕೆ ಬರುವಳು ಇಂದು ! ಮತ್ತೊಮ್ಮೆ
ನಕ್ಕು ನಗೆಯಾಡಿಸುವೆ ! ನಾಚುತಲಿ ಕೆಂಪಾಗಿ
ನಿರ್ಮಲತೆ ಕಂಗಳಲಿ ನಲುಮೆ ಬೀರುತಲೊಮ್ಮೆ
ಅಂದಿನೊಲು, ಕೊಂಕಿನಲಿ, ಒಂದು ಚಣ ತಲೆಬಾಗಿ,
ಮತ್ತೆ ಎದೆಯೆಡೆ ಸುಳಿದು, ನಗುವ ಸೂಸುತ ಬೀಗಿ,
ಕುಣಿಯುವಳು ಎಂದಿದ್ದೆ !

ಮುಂಬಂದು ಕಂಡೆನದ !

ಜೀವನದ ವಿಷದೊಡಲ ಸರ್ಪಗಳ ಉರಿ ತಾಗಿ,
ಸಾವಿನೆಡೆ ದಿಬ್ಬಣವ ಬೆಳಸಿರುವ ಎಳತಸದ
ಉಷೆಯು ನನ್ನುಷೆಯು ! ಒಲವಿಗಿದೆ ಕೊನೆಯೇನು ?
ಆದರೂ ಸ್ವರ್ಗದಲಿ ದೇವ ನಗುತಿಹನೇನು ?

# ಚಂದ್ರ ಚಕೋರಿ

ಇರುಳಿನ ಮುಡಿಲಲಿ ಒಲವಿನೊಂದು ಮುನ-
ದಾಸೆಯು ನನಸಂತೆ,
ಆಗಸದೊಡಲಲಿ ಚಂದಿರ ನಗುತಿರೆ,
ಜೀವವೆ ಕನಸಂತೆ !

ಒಂದು ಚಕೋರಿಯು ಚಂದಿರನೊಲವನು
ಪಡೆಯಲೆಂದು ಮನವ
ಭಾವ ಪುಷ್ಪಗಳ ಪರಿಮಳವಾಗಿಸಿ
ಹರಿಸಿತು ಎದೆಯೊಲವ !

ಹಕ್ಕಿ ಚಂದಿರನ ಸನಿಯ ಸಾರಲಿಕೆ
ಚಿಮ್ಮಿ ಹಾರುತಿಹುದು.
ಒಲವಿನ ಎಣೆಯಿಲ್ಲದ ಸುಖದಾಸೆಯು
ಸ್ಫೂರ್ತಿಯನಿತ್ತಿಹುದು.

ಹಾರಿ ಹಾರಿ, ಸರಿ ಸಾರಿ ಬೀಳುತಿರೆ,
ಹಕ್ಕಿ ನೋಡಿತಲ್ಲಿ,
ಇರುಳನಲ್ಲ ತನ್ನೊಲವ ಚಂದಿರನು
ಹಗಲ ಹಿಡಿತದಲ್ಲಿ.

ತನ್ನೆದೆಯೊಲವಿನ ಆಸೆಯೆಲ್ಲ ಹುಸಿ
ಹುಡಿಯು ಗುಡ್ಡೆಯಾಗಿ,
ಹಕ್ಕಿ ಚಿಂತಿಸಿತು ಇನಿಯನ ಜತೆಯನು
ಸೇರುವ ಬಗೆಗಾಗಿ.

ಸುಖ ಸಂತೋಷದಿ ನೋಡಿತೊಂದು ಕಿಡಿ
ಬೆಂಕಿ ಮಸಣದಲ್ಲಿ ;
"ಇದರ ಉಡಿಯೊಳೆನ್ನೆದೆಯ ನೀಗುವೆನು,
ಉಳಿವೆ ಬೂದಿಯಲ್ಲಿ.

ಮುಂದಕೊಂದು ದಿನ, ಶಿವನು ಈ ಕಡೆಗೆ
ಬಂದೆ ಬರುವನೆಂದು,
ಚಿತೆಯ ಭಸ್ಮವನು ಕೈಯಲೆತ್ತಿ ಹರ
ಹಣೆಗೆ ಇಡುವ ನಿಂದು.

ಶಂಕರಶಿರದಲಿ ರಾಜಿಸುತಿಹನದೊ,
ಇನಿಯನವನ ಬಳಿಗೆ
ಚಿತೆಯ ಭಸ್ಮದಲಿ ಸಾರಿ ಸೇರುವೆನು,
ತ್ಯಾಗ ಒಲವ ನೆರಿಗೆ."

ಎನುತ ಹಕ್ಕಿ ಹಾರಿತ್ತು ಬೆಂಕಿಯಲಿ,
ಮೂರೆ ಗಳಿಗೆಯಲ್ಲಿ
ಜೀವ ಹಾರಿರಲು, ರವಿಯು ಉದಿಸಿದನು
ಬಾಳ ಮೂಡಲಲ್ಲಿ !

# ಓ ಮಧುರ ಮಾರುನುಡಿ !

ಜೀವನದ ಹಗಲಿನಲಿ
ಕನಸು ಸಂಜೆವಂದದಲಿ,
ಆಕೆ ಬಂದಳು ಮುಂದೆ ;
ನಡುಹಗಲು ಬರುತಿರಲು
ಅಳಿವಡೆವ ನೆರಳಿನೊಲು
ಹಾರಿಹೋದಳು ಹಿಂದೆ !

ಅವಳಿಲ್ಲ, ಈಗೆನ್ನ
ಮನಸು ಕನಸಿನ ಅನ್ನ.
ಕಂಗೆಟ್ಟ ಶಶಿ ನಾನು ;
ದಿನ ದಿನಕು ಸಣ್ಣಾಗಿ,
ದುಃಖದಲಿ ಹಣ್ಣಾಗಿ,
ಅಳಿವ ದಾರಿಗೆ ಹವಣು !

ಓ ಮಧುರ ಮಾರುನುಡಿ,
ನನಗಾಗಿ ಇನಿತು ತಡಿ,
ನನ್ನೆದೆಯ ಅಳಲು-ಕೇಳು :
ಅದು ಚೂರು ಚೂರಾಗಿ,
ದನಿ ನೂರು ನೂರಾಗಿ,
ಹರಡೆ ನೀನದ- ಹೇಳು !

# ಕೋಗಿಲೆಯ ಹಾಡು

ನಿಶಿಯ ನೀರವ ಮೌನದೆದೆಯ ಏಕಾಂತವನು
ಭೇದಿಸುತ ಗಾಳಿಯಲಿ ತೂರಿಬಂತು
ಯಾವುದೋ ನೋವಿನಲಿ ತನ್ನ ಬಾಳಿನ ಹಣತೆ
ತೇಲಿಬಿಟ್ಟೊಂದು ಕಿರು ಕೋಗಿಲೆಯ ಕೊರಗು.

"ಕೋಗಿಲೆಯೆ ಇಂದೇಕೆ-ಈ ಋತು ವಸಂತದಲಿ
ನಿನ್ನಿನಿಯನೊಲವಿನೆದೆ ಮಡಿಲೊಳಿರದೆ
ಇಲ್ಲಿ ಏಕಾಂತದಲಿ ತುಂಬು ನೋವಿನೊಳೆದೆಯ
ಹರಿಸಿ ಹಾಯಿಸುತಿರುವೆ-ನನ್ನೊಲವ ನೋವೆ

ನಿನ್ನೊಲವ ಪರಿಯೇನು ? ನಾ ಕಳೆದುಕೊಂಡಿರುವ
ಬೆಳಕ ಕಾತರದಲ್ಲಿ ಹಾಡುತಿಂದು
ನನ್ನ ಹೃದಯದೊಳೇಕೆ ಬಿರುಗಾಳಿಯೆಬ್ಬಿಸಿಹೆ ?
ಹೋಗು ದೂರಕೆ ಹುಚ್ಚೆ" ಎಂದೆ ನಾನಾಗ !

"ಅಯ್ಯೊ ! ನನ್ನೀ ಬಾಳ ನೋವ ಕೇಳುವರಿಲ್ಲ
ವಿಶ್ವದೊಳಗೆನಗೆ ವಿಧಿಯಿತ್ತುದಿನಿತೆ ?
ನಾನೇಕೆ ಉಳಿದೆನೋ ನನ್ನವರ ಜತೆಯಲೇ
ನನ್ನನೂ ಕೊಂಡಿದ್ದರೆನಿತು ಸುಖವಿತ್ತು !

ಓ ವಿರಹಿ ಕವಿ, ನಿನ್ನ ನೋವಿನೇಕಾಕಿತನ
ನನಗೆ ಅರಿವಿದೆ ; ನನ್ನ ನೋವ ಕೇಳು,
ಬಾಳು ಎಂತಿಹುದೆಂದು, ಬಾಳು ಎಂತಹುದೆಂದು.
ಬಾಳ್ಗೆ ಬಾಳುವೆಯುಂಟೆ ಒಲವಿಲ್ಲದಂದು ?

ಹಿಂದೊಂದು ದಿನ ಒಂದು ಕಾಗೆಗಳ ಹಿರಿ ತಂಡ
ಕೋಗಿಲೆಯಂ ಗೂಡೊಂದ ದಾಳಿಯಿಡಲಂ,
ಗಂಡುಂ ಕೋಗಿಲೆ ತನ್ನ ಹೆಂಡತಿಯಂ ಕಾಪಿಡಲು
ಹೋರಾಡಿ, ಹೋರಾಡಿ, ಜೀವ ಪಣವಿಡಲಂ,

ಹೆಣ್ಣಿನ ಹೃದಯದ ನೋವು, ಕಾತರತೆ, ಭೀತಿಯಲಿ
ಕಾಗೆಗಳ ಕೂಗಿನಲಿ-ತಲ್ಲಣದಲಿ
ಹಿಮ್ಮೆಟ್ಟಿ ಹಾರುತಿರೆ- ಕ್ರೂರಿ ಕಾಗೆಯುದೊಂಡಂ
ಮೃತ್ಯುವೊಲಂ ಚಿಮ್ಮಿತದರೆದೆಯಂ ಕಂಕ್ಕಿಡಲಂ.

ಹೂಂಕರಿಸಿ, ಹೇಂಕರಿಸಿ, ಕಂಕ್ಕಿ ಜೀವವ ಹಿಂಡಿ,
ಕೋಗಿಲೆಯು ನೆತ್ತರಲಿ ತನ್ನ ಕೊಕ್ಕು
ಕೆಂಪಡರೆ, ಸಂತಸದಿ, ಕಾಗೆ ಗೂಡಿಗೆ ಬಂದಂ.
ಮೂಲೆಯೊಳಗಿದ್ದೊಂದಂ ಮೊಟ್ಟೆಯೇನು ಕಂಡಂ,

ಓಗ್ಗಿನಲಿ ಕೊಂಡೊಯ್ದು, ತನ್ನ ಗೂಡಿನಲದಕೆ
ಕಾವಿತ್ತು, ಮರಿಮಾಡಿ, ಗಂಟಂಕನಿತ್ತು,
ತನ್ನಂತೆಯೇ ಅದಕು 'ಕಾ' ಎನಲಂ ಕಲಿಸಂವೆನಂ
ಎನುತ ಯತ್ನಿಸುತಿರಲು-ಮರಿಯಂ ದನಿ ಬೇರೆ !

ಜಗದ ಕರ್ಕಶವೆಲ್ಲ ಕೂಡಿ ಮಾಡಿಸಿದಂತೆ
ಕಾಗೆ ತನ್ನಯು ಕೊರಳ ಹೊರಳಿಸಿರಲಂ,
ಕೋಗಿಲೆಯು ಮರಿ ಹಾಡೆ ಜಗದಿ ಜೀವದ ತಾರೆ
ಪುಲಕಿಸಿತಂ. ಅರಳಿತ್ತು ಋತು ಕಾಮಂಬಣ್ಣ !

ನನ್ನಂತೆಯೇ ಹಾಡು ಎನಂತ ಎಳ ಕೋಗಿಲೆಯು
ಕತ್ತ ನಂಲಿಚಿತಂ ಕಾಗೆ ಈರ್ಷ್ಯೆಯಲ್ಲಿ,
ಕಾಗೆಯೊಲು ಕೂಗಲೆಂದೆನಿತು ಯತ್ನಿಸಲೇನಂ !
ಮಧುರ ಗೀತವೆ ಮರಿಯಂ ಕೊರಳ ದನಿಯೊಳಗಂ !

ಕಾಗೆಗಳು ದ್ವೇಷದಲಿ ಗುಂಪುಗೂಡುತ ಎಳೆಯು
    ಕೋಗಿಲೆಯು ಕತ್ತಿನಲಿ ಕೊಕ್ಕನಿಟ್ಟು
ಚುಚ್ಚಿದುವು, ತಮ್ಮಂತೆ ಕಂಠ ಒಡಕಾದೊಡದು
    ಹಾಡುವುದ ನಿಲ್ಲಿಪುದು, ಆಗ ಸರಿಯೆಂದು !

ಈ ನೋವ ಮುಂಗಿಸಲೆಂದೊಂದಿರುಳು ಕೋಗಿಲೆಯು
    ಹಾರಿತ್ತು ದೂರಕ್ಕೆ ಗೂಡಿನಿಂದ ;
ಇಂದದಕೆ ನೆಲೆಯಿಲ್ಲ-ಜಗದಲ್ಲಿ ಒಲವಿಲ್ಲ,
    ಆದರ ಹಾಡಿನ ಹುರುಳು ಬರಿಯ ನೋವಾಯ್ತು !''

ಏನಂತ ಹಾಡಿತು ಹಕ್ಕಿ ತನ್ನ ಬಾಳಿನ ಪಾಡು,
    ಕೇಳಲಿಲ್ಲಾನದರ ಉಲಿಯು ಮತ್ತೆ.
ಎಲ್ಲಿ ಹೋಯಿತೊ ಏನೊ ! ಬಾಳನೇ ಬಿಟ್ಟಿತೋ ?
    ಕೋಗಿಲೆಗೆ ಇರಲಿಲ್ಲವೇನೊ ನೆಲೆಯಿಲ್ಲಿ !

ಇಂತೆ ಹಾಡಲು ಬೇಕು, ಅಂತೆ ನುಡಿಯಲು ಬೇಕು ;
    ಎಂತಾದರೂ ಸರಿಯೆ ನಮ್ಮ ಬಗೆಯ
ಅನುಸರಿಸಿ ಕವಿಯಾಗು. ಇಲ್ಲದೊಡೆ ನೆಲೆಯಿಲ್ಲ !
    ನಿನ್ನ ಹಾಡನು ಕೇಳಿ ಮೆಚ್ಚುವವರಿಲ್ಲ !

ಏನಂತ ಕವಿಗಳಿಗೆಲ್ಲ ಹಸಿವ ಬಂಧನದಲ್ಲಿ
    ಹಿಡಿದು, ಹಿಡಿತದಿ ಹಿಗ್ಗಿ ತಗ್ಗಿ ದುಡಿಸಿ,
ದೂರಿಡುವ ಕನ್ನಡದ ನಾಡ ಕವಿಗಳ ಪಾಡೆ
    ಕೋಗಿಲೆಯ ಪಾಡೇನೊ ಎನಿಸಿತೆನಗೆ !

# ಸುಂದರತೆಯಾನಂದ

ಸುಂದರತೆಯಾನಂದ ಅಮರವೆಂದನಂ ಅಂದಂ
ಕವಿ ಕೀಟ್ಸ್ನ ಕಲ್ಪನೆಯಂ ಕನಸಿನಲಿ ಮೈವೆರೆತು ;
ನನಸಿನಲಿ ತಾನೊಲಿದ ಸೌಂದರ್ಯದಲಿ ಬೆಂದಂ,
ಅದು ತನಗೆ ದೊರಕದೆಯೆ ಸಾಗಿಹೋಗುವುದರಿತಂ
ಸಾವ ಸುಖ ಬಯಸಿದನಂ ! ತಂಗಾಳಿ ಬೀಸಂತಲಿ
ಹೊತ್ತು ತರುವಂದದಲಿ ಹೊಸ ಹೂವ ಪರಿಮಳವ,
ಸೌಂದರ್ಯ ಕಂಡೊಡನೆ, ಆನಂದ ಸೂಸಂತಲಿ
ಹುದುಗಿಸಂತ ತನ್ನೊಳಗೆ ತಹಂದಂ ದುಗುಡದ ನೋವ !
ಮೊದಲ ಪರಿಚಯಂವಾಗಿ ನಿನ್ನ ನೋಡುತಲಂದು,
ಇನಿತಂ ದಿನವೂ ಬಯಸಿ, ಯುಗ ಯುಗದ ಕನಸಿನಲಿ
ನೆನೆದ ಸೌಂದರ್ಯವೇ ನನಗೆ ದೊರಕಿಹುದೆಂದಂ
ಹಿಗ್ಗಿದೆನಂ ಸಂತಸದಿ !–ಅಂದಿನಾನಂದದಲಿ
ಮುಚ್ಚಿತ್ತು ಈ ನೋವು ! ನೀನೆಲ್ಲೊ, ನಾನೆಲ್ಲೊ
ಇಂದಂ ! ಅದಕಾಗಿಯೇ ಅಂದು ಕೂಡಿದೆವೆಲ್ಲೊ !

# ಜಗ ಬದಲಾದರೂ ಜೀವನ ಬದಲದು !

ಜಗದೊಳಗೆಲ್ಲೆಲ್ಲಿಯುಂ ಕ್ರಾಂತಿ
ಹಬ್ಬಿ, ದಲಿತ ಜನ ಜೀವನದುನ್ನತಿ
ಸಾಧಿಸುತ್ತಿದೆ. ತರುತಿದೆ ಶಾಂತಿ.
ನನ್ನ ಬಾಳಿಗಿನ್ನೆಲ್ಲಿದೆ ಹೊಸ ಗತಿ ?
ಜಗ ಬದಲಾದರಂ, ಜೀವನ ಬದಲದಂ !

ರಷ್ಯದ ವೀರರ ಕೆಚ್ಚು ಕಾಳಗ,
ಐಷ್ಯದ ಜನತೆಯಂ ಸ್ವಾತಂತ್ರ್ಯದ ರವ,
ಮೊಳಗಿವೆ ನಾಳಿನ ಮಂಗಳದೋಲಗ
ಆದರಂ ನನಗಿಲ್ಲದರೊಂದನುಭವ !
ಜಗ ಬದಲಾದರಂ, ಜೀವನ ಬದಲದಂ !

ನಾಡಿನ ಬಾಳಿಗೆ ಸ್ವಾತಂತ್ರ್ಯದ ಸಿರಿ
ಸಾಧಿಪರಾಡುವ ಮಾತುಗಳೇನಂ
ಒಲವಿನ ಗೆಳತಿಯುಂ ಅಳಿದ ನೆನಪ ರ್ಝರಿ
ತುಂಬಿಹ ಕಂಬನಿ ನಿಲ್ಲಿಪುವೇನಂ ?
ಜಗ ಬದಲಾದರಂ, ಜೀವನ ಬದಲದಂ !

# ಯಾವುದ ನೆನೆಯಲಿ, ಯಾವುದ ಬಿಡಲಿ !

ನಾವೀರ್ವರು ಜತೆಗೂಡುತ ಕಳೆದಾ
ಸಂಖದ ಹೂವ ಹೊಂಬಾಳನು ನೆನೆವೆನ,
ಕಣ್ಣು ಬಿಡಿಯೆಂಬುದು ದುಃಖದ ಹನಿಯಂಳಿದಾ
ಬಾಳಿಂದಿಲ್ಲವೆ, ಸೇರಿರೆ, ಆಳಿವಂನೆ !
ಗೆಳತಿ, ಯಾವುದ ನೆನೆಯಲಿ, ಯಾವುದ ಬಿಡಲಿ ?

ಅಂದು ಒಲವಿನ ಮೊದಲಿನ ಮುತ್ತಲಿ
ಲಜ್ಜೆ ಸಂತಸದ ಕಮಲದ ಮುಖವನು
ನೆನೆದರೆ, ತರುವುದು ಕೊನೆಯ ಚಣಗಳಲಿ
ಸಾವದ ಸೆರೆಮಾಡಿದ ಹದನಂ !
ಗೆಳತಿ, ಯಾವುದ ನೆನೆಯಲಿ, ಯಾವುದ ಬಿಡಲಿ ?

ಸಂಖ ನೆನೆದರೆ, ಬೆನ್ನಿಗೆ ಬರುವುದು
ದುಃಖದ ಬಾನಿನ ಶೂನ್ಯದ ಮರುದನಿ !
ದುಃಖವ ನೆನೆದರೆ, ವಿರಹದ ಬಾಳಿದು
ಸಾವಿನ ಕಡಲಲಿ ಆಯಿತೊಂದು ಹನಿ !
ಗೆಳತಿ, ಯಾವುದ ನೆನೆಯಲಿ, ಯಾವುದ ಬಿಡಲಿ ?

# ನನ್ನ ವೀಣೆಯು ಮಲಗಿದೆ !

ಹಗಲ ಹೊನ್ನಿನ ಕಿರಣರಾಶಿಯು ಬೆಳಕು ಕತ್ತಲ ಮಡಿಲಲಿ
ಮಲಗಿ ನಿದ್ರಿಸೆ ಸಂಜೆರಾಗದ ಜೋಗುಳದ ಸವಿನುಡಿಯಲಿ,
ಗಾಳಿ ತೂರಿದೆ ಮೇಘಮಾಲೆಯು ಮುಗಿಲ ಮಂಟಪ ಗೆಜ್ಜೆಗೆ
ಮಾಲೆಯಾಗಿಡೆ ನಿಶೆಯು ಒಲವಿನ ರವಿಯು ನೀರವ ಸೆಜ್ಜೆಗೆ !

ಹೊನ್ನ ಹೊರಗನು ತೊರೆದು ಭೂಮಿಯು ಬಣ್ಣ ಬಣ್ಣವ ತಾಳಿದೆ ;
ಎದೆಗೆ ಜವ್ವನ ಋತುವು ಬರುತಿರೆ, ನುಡಿವ ತಂತಿಯು ಮುರಿದಿದೆ !
ಋತು ವಸಂತವು ಮೂಡಿ ಬಂದಿದೆ, ಶಿಶಿರ ದೂರಕೆ ಸಾರದು !
ಜಗದ ವೀಣೆಯು ನುಡಿಯುತಿರುವುದು, ನನ್ನ ವೀಣೆಯು ನುಡಿಯದು !

ನೀಲಮಂಚದ ಮೇಲೆ ತಾರೆಯು ಮೊಲ್ಲೆ ಹೂಗಳನೆರಚುತ,
ಸುತ್ತ ಮೋಡದ ಮುತ್ತು ಹವಳವ ಕಿತ್ತು ಎಲ್ಲೆಡೆ ಚೆಲ್ಲುತ,
ಶಶಿಯು ಒಲವಿನ ಕಿರಣದುದಯಕೆ ಇರುಳು ಕಾದಿರೆ ನಾಚುತ,
ಸುಪ್ತ ಗೀತವ ಮತ್ತ ರಾಗದಿ ತಪ್ತ ಕೋಕಿಲ ಹಾಡಿದೆ !

ಶಶಿಯು ತೋರಲು ನೀಲದಿರುಳಲಿ ತಾರೆಗಡಣದ ಮಧ್ಯದಿ
ಒಲವ ಗೀತದ ನಾಡಿ ಮಿಡಿದರು ವೀಣೆಯೇತಕೊ ಸೊರಗಿದೆ.
ಇರುಳ ರಾಗವು ಹೂವ ಹಾಸಿಗೆ ಹಾಸಿ ಕಾದಿರೆ ಮೌನದಿ
ಉಷೆಯು ಬಾರದೆ ಹಾಡಲೇತಕೆ ಎನುತ ವೀಣೆಯು ಮಲಗಿದೆ !

# ಅಂದು–ಇಂದು

ಬಿಗುಮಾನ ಒಂದೆಡೆಗೆ ; ಬಿಂಕ ಮತ್ತೊಂದೆಡೆಗೆ,
ಬೇರಾವುದೋ ಹೊಸತು ಭಾವವಾವರಿಸಿರಲು
ಮೊದಲ ಪರಿಚಯದಂದು ಕಣ್ಣೆತ್ತಿ ನೋಡದೆಯೆ
ಮೌನದಲಿ ಮಾತುಗಳ ಮುಳುಗಿಸುತ ಹಿಗ್ಗಿದೆವು.
ಚಪಲ ಚಂಚಲ ಕಣ್ಣು ನೋಡಲೆಳಸುತಲಿತ್ತು !
ಹೃದಯ ಹರಿಯುತಲಿರಲು ಒಲವ ಹೊನಲಾಗುತಲಿ
ಅಂತು ಎಂತೋ ಏನೊ ತಂಗಾಳಿ ಬೀಸಿತ್ತು.
ಒಂದೆ ಹೂವರಳಿತ್ತು ನಮ್ಮಿರ್ವರೆದೆಗಳಲಿ !

ಆ ಹೂವಬಾಳಿಂದು ಚೂರು ಚೂರಾಗುತಿದೆ !
ಅಂದಿನಂತಲ್ಲಿಂದು ಅಗಲಿಕೆಯ ಅರುಣ ದಿನ !
ಆನಂದ ಸಾಗರದಿ ಮಿಂದ ಎರಡಾತ್ಮದೆದೆ
ದಳವೆಲ್ಲ ಬೇರಾಗಿ ಚೂರಾಗಿ ಅಳಿವ ದಿನ !
ಮೊದಲ ಪರಿಚಯದಂತೆ ಸಾವಿನೀ ದಿನವಲ್ಲ.
ಆದರೂ ಮೌನ ಮಾತಿನ ಮಸಣ !—ವಿಧಿಯಿಲ್ಲ !

# ಗೆಳತಿ, ನೆನಪೇತಕೆ ಬರುವುದೊ ?

ಕೋಗಿಲೆಯೊಲವನು ಉಲಿದಾಗ,
ಪೂರ್ವದ ಗಾಳಿಯು ಸುಳಿದಾಗ,
ಪುಲಕದಿ ಮನ ಮೈ ಮರೆತಾಗ,
ಗೆಳತಿ, ನೆನಪೇತಕೆ ಬರುವುದೊ ನಾನರಿಯೆ !

ಗುಲಾಬಿ ಹೂವುಗಳರಳಿ, ತಿರೆ
ಮಲಾಮೆಯಿಂದಲಿ ಮೆರೆಯುತಿರೆ,
ಬಾಳಿನ ಕಂಬನಿ ಮರೆಯುತಿರೆ,
ಗೆಳತಿ, ನೆನಪೇತಕೆ ಬರುವುದೊ ನಾನರಿಯೆ !

ಸಂಜೆಯು ಬಂಗಾರದ ಗುಡಿಯಲ್ಲಿ
ಇರುಳಿನ ಕಾಳಿಯ ಪೂಜಿಸುವಲ್ಲಿ,
ಮಂಜಿನ ಹೂಮಳೆ ಕರೆದಿರುವಲ್ಲಿ,
ಗೆಳತಿ, ನೆನಪೇತಕೆ ಬರುವುದೊ ನಾನರಿಯೆ !

ಬಾನಲಿ ಬೆಳುದಿಂಗಳ ಕುಡುಗೋಲು
ತಂಪು ಸಿಡಿಲಿನೊಲು ಸಾಗಿರಲು,
ಹೃದಯ ಎಲ್ಲಿಯೋ ದೂರ ಹಾರಿರಲು,
ಗೆಳತಿ, ನೆನಪೇತಕೆ ಬರುವುದೊ ನಾನರಿಯೆ !

ಆರೆನಿದ್ರೆಯ ಮಡಿಲಲಿ ಎಚ್ಚರಿಕೆ
ಉಯ್ಯಾಲೆಯನಾಡಿರೆ, ಎಳಗರಿಕೆ
ತಾರೆಯ ಸಂಗಕೆ ಕಳುಹಿರೆ ಕೋರಿಕೆ,
ಗೆಳತಿ, ನೆನಪೇತಕೆ ಬರುವುದೊ ನಾನರಿಯೆ !

ಬಿಳಿ ಮೋಡದ ನಡುವಿನ ನೀಲದಲಿ
ಸುಳಿ ಮಿಂಚಿನ ವೇಗದ ತೀರದಲಿ
ಬಳಿ ಸಾರುವ ಇರುಳಿನ ರಾಗದಲಿ
ಗೆಳತಿ, ನೆನಪೇತಕೆ ಬರುವುದೊ ನಾನರಿಯೆಂ!

# ಕಾರಂಜಿ ಕೆರೆಯ ಬಳಿ

ಗಾಳಿಯಲ್ಲಾವುದೋ ಕೋಗಿಲೆಯುಂ ತನ್ನೆದೆಯಂ
ಅಳಲ ತೇಲಿಬಿಡುತಿದೆ. ದೂರದಲಿ ನೀಲಿಮೆಯ
ಆಗಸದಲೊಂದೊಂದು ಬಿಳಿಯೆಳ್ಳು ಸಿಡಿದಂತೆ
ನಕ್ಷತ್ರ ಮೂಡುತಿರೆ, ಮೂಡಲೋ ಬೇಡವೋ
ಎನುತ ಚಿಂತಿಸುತೊಂದು ಎಳೆತಾರೆ ಕತ್ತಲಲಿ
ಬೆದರಿ ಹೊದ್ದಿದೆ ಮುಸುಕು ! ಕಾರಂಜಿ ಕೆರೆಯಲ್ಲಿ
ಅಲಗುವುದೊ, ಮಲಗಿಹುದೊ, ಎನುವಂತೆ ಸುಳಿಯುತಿಹ
ಮೆಲ್ಲಲೆಗಳಾಳದಲಿ ನೆರಳುಗಳು ನಡುಗುತಿವೆ !
ಅವು ತೊಟ್ಟ ನೀರಂಗಿಯಲಿ ಕಾಲ ಮಾಡಿಟ್ಟ
ಹರುಕಿನಲಿ, ತಾರೆಗಳ ಛಾಯೆ ಅಲ್ಲಲ್ಲಿರಲು,
ದೂರದಲಿ, ಮೂಡಲಕೆ, ಕಂಬವೊಂದರ ಮೇಲೆ
ಮುಕಡರಿ ಮಿಣುಕುತಿಹ ದೀಪವೊಂದರ ನೆರಳು
ಅಲೆಗಳಾಳದ ಇರುಳ ಭೇದಿಸುತ ಅತ್ತಿತ್ತ
ಒಸರುತಿದೆ. ಆ ಮೂಲೆಯೊಳಗೊಂದು ಬೆಳ್ಳಕ್ಕಿ
ನೀರೊಳಗ ಮೀನುಗಳ ಸಂಸಾರವನು ಹೊಂಚಿ
ಕಾಯುತಿದೆ. ಇತ್ತ ಮೃಗಶಾಲೆಯಲಿ, ಬಂಧನದ
ಕೊಳನುಣ್ಣುತ ಮರುಗಿ, ಬಿಡುಗಡೆಗೆ ಹಂಬಲಿಸಿ,
ಒಲ್ಲದೆಯೆ ಬಲ್ಲಿದರ ಬಿಲ್ಗಳಿಗೆ ನೇಣಾಗಿ,
ಕಾತರದಿ, ಸಂಕಟದಿ, ಇರುಳಲೇ ನರಳುತಿಹ
ಹಾರು ಹಕ್ಕಿಗಳೆದೆಯ ಕೊರಗ ದನಿಯೊಳು ದನಿಯ
ಕೂಡಿಸಿವೆ ಕಾಡ ಹುಲಿ ಸಿಂಹಗಳು. ಅದ ಕೇಳಿ
ಮಾರುದನಿ, ಆ ಕಡೆಗೆ, ಮಾನವನ ಮುಗಿಲಾಸೆ
ಬಿಂಬಿಸುತ, ಚಾಮುಂಡಿ ಬೆಟ್ಟ ನೆಟ್ಟನೆ ನಿಂತು
ಮುಗಿಲಿಗೀಟಿಯ ಹಾಕಲೆನುವಂತೆ ನಿಮಿರಿಹುದ
ಕಂಡು ಹಿಂದೆಗೆಯುತಿದೆ ; ಮೌನಕ್ಕೆ ಶರಣಾಗಿ

ನೀರಿನಲಿ ಮುಳುಗುತಿದೆ. ನೀರ ಪಕ್ಕದ ಹಾದಿ
ತುಳಿಯುತಿಹ ಗೆಳೆಯರಗೊ, ಕತ್ತಲಲಿ ಬರಿಯೆರಡು
ನೆರಳಾಗಿ ಸರಿದಿಹರು. ಅವರಲೊಬ್ಬನ ದನಿಯು
ಪೆಣ್ತನದ ಮಾಧುರ್ಯ, ಅಳಿದ ಬಾಳಿನ ಒಂದು
ಸವಿಗನಸ ನನಸಂತೆ, ಹೃದಯದೊಳಿಂಚರದಿ
ಹಾಸು ಹೊಕ್ಕಾಗುತಿರೆ, ಮೈ ಮನಸು ಮೇಲೇರಿ
ಆಗಸದ ಮಂಡಿಲಿನಲಿ ಉಯ್ಯಾಲೆಯಾಡುತಿಹ
ಬಿಳಿ ಮೋಡದೊಳಗೊಂದು ಕಣವಾಗಿ ಇಣುಕುತಿದೆ.
ಕೇಳುತಿದೆ–ಸ್ವರ್ಗದೊಳಗಿಂತು ಆತ್ಮೀಯತೆಯು,
ಗೆಳೆತನದ, ನೆನಪುಗಳ, ಪ್ರೇಮದುನ್ಮಾದಗಳ
ನೋವು ನಲ್ಮೆಗಳುಂಟೆ ?—ಇಲ್ಲಿರಲು ಅಲ್ಲಿಲ್ಲಿ ?

# ಏಳೆನ್ನ ಮನದನ್ನೆ

ಏಳೆನ್ನ ಮನದನ್ನೆ, ಏಳು ಚೆನ್ನಿಗ ಕನ್ನೆ
ಏಳು ಮೂಡಲ ಕೆನ್ನೆ ಕೆಂಪಾಯಿತು.
ಬಾಳಬೃಂದಾವನದಿ, ನಾಳೆಯೊಲವಿನ ರವದಿ,
ಆಸೆ ಮರೆಯುತಲಿಹುದು ಕಳೆದ ನಿನ್ನೆ !

ಕೊಳದ ನೀರಲಿ ಶಾಂತಿ ಮೂಡಿಹುದು. ರವಿ ಕಾಂತಿ
ಬೆಳ್ಳಿಯಲೆಗಳ ಭ್ರಾಂತಿ ಹೊಳೆಯುತಿಹುದು.
ತೀಡುತಿಹ ತಂಗಾಳಿ ಮಿಡಿಸದಿದೆ ಅಲೆಯೋಳಿ,
ಇಂತಿರಲು ಕಮಲಕಳಿ ನಡುಗುತಿಹುದು !

ಬಿರಿದ ಹೂವಿನೊಳೊಂದು ದುಂಬಿ ಇರುಳಲಿ ಬಂದು
ಒಲವಿನಲಿ ಮನ ನಿಂದು ಇರುಳನೆಲ್ಲ
ಕಮಲದಲೆ ಸೆರೆಯಾಗಿ, ಹೊರ ಜಗಕೆ ಮರೆಯಾಗಿ,
ನಡುಗಿಸಿದೆ ಹುಚ್ಚಾಗಿ ದಳವನೆಲ್ಲ !

ಅಂತೆ ನಿನ್ನೊಲವಿನಲಿ ನನ್ನೆದೆಯ ಗೀತದುಲಿ
ಶೃಂಗಾರದಳಗಳಲಿ ಸೆರೆಗೆ ಸಿಕ್ಕಿ,
ನಿನ್ನ ಬೇಡುತಲಿಹುದು, ತನ್ನ ನೀಡುತಲಿಹುದು,
ಎದ್ದೇಳು ಕಣ್ಣಮಣಿ, ನಿದ್ದೆ ಮಿಕ್ಕಿ !

# ಆಟವಾಡುವ ಮಕ್ಕಳನ್ನು ಕಂಡು

"ಆಟದಲಿ ನಿಮಗಿರುವ ಹಿಗ್ಗು ಎಲ್ಲೆಡೆ ಹಬ್ಬಿ
ನನ್ನನೂ ಆವರಿಸಿ ಸೆಳೆಯುತಿದೆ, ನಿಮ್ಮೊಡೆಗೆ
ಕೂಡಿ ಆಡುವೆನೆನುವ ಆಸೆ ಎದೆಯನು ತಬ್ಬಿ
ಎಳತನವನೆಬ್ಬಿಸಿದೆ. ಕಳೆದ ಕಾಲದ ಕಡೆಗೆ
ನೆನವು ಹರಿಸಿದೆ ಇಂದು".



ಅದು ಹಿಂದೆ, ಬಲು ಹಿಂದೆ.
ಇನ್ನು ಎಳತನದಲ್ಲಿ, ನೆರೆಯ ಹುಡುಗಿಯು ಕೂಡ
ಕಣ್ಣುಮುಚ್ಚಾಲೆಯನು ಆಡುತಿರೆ–ನಾನೆಂದೆ :
"ನಿನ್ನ ಹಿಡಿದರೆ ನಾನು, ನೀನೆನ್ನ ಎದೆಗೂಡ
ಹಕ್ಕಿಯಾಗುವೆಯೇನು ?" ಅದಕೆ ನಸ್ನುಪೆ ನಾಚಿ,
ಕಣ್ಗೆ ಕಣ್ಗೂಡಿಸುತ, ಎಳೆಯೊಲವ ಸವಿ ನಗೆಯು
ನಕ್ಕು, 'ಹೂಂ' ಎಂದವಳು, ನಾಲಗೆಯ ನಸು ಚಾಚಿ,
ನನ್ನ ನಣಕಿಸಿ ನುಸುಳಿ, ಅವಿತುಕೊಳ್ಳುವೆನೆನುತ
ಓಡಿದಳು. ಆಕೆ ಅವಿತಿಹಳೆಲ್ಲೊ, ಅದ ಕಾಣೆ !
ಎದೆಗೂಡು ಬರಿದಾಗಿ ಕೂಗುತಿದೆ ಅವಳನೇ!

# ಕಣ್ಣೀರಿನ ಕಡಲಿನ ಮೇಲೆ!

ಕಣ್ಣೀರಿನ ಕಡಲಿನ ಮೇಲೆ
ಮಿಂಚಿದೆ–ನನ್ನೀ ಬಾಳಿನ ಒಲವಿನಲೆ!

ದೂರ ತೋರಿದಾ ನೀಲ ಬೆಟ್ಟಗಳ ನೀಲ ಮುಗಿಲಿನಲ್ಲಿ
ಮುಳುಗು ಸೂರ್ಯನಾ ಕೆಂಪು ಕಾಡಿಗೆಯ ಬಣ್ಣ ಮಡಿಲಿನಲ್ಲಿ
ತಾರೆ ಒರೆಯಲಿ ನಿಂತು ನೋಡುತಿರೆ, ಅಲೆಯು ಮೇಲೆ ಹೊಮ್ಮಿ
ಚಿಣ್ಣ ಚಿಣ್ಣನೇ ದುಂಗುಡ ಹನಿಗಳಲಿ ಹಾರುತಿಹುದು ಚಿಮ್ಮಿ!

ನಾವು ಪಡೆದುದಿದು ; ಜೀವ ನೀಡಿದುದು ; ಸಾವು ತಂದುದಿದನೆ ?
ಕೇಳಿ ಕಾಡಿ ಯುಗ ಬಾಳ ವಿರಹದಲಿ ತಂದ ಹಸದ ಹದನೆ ?
ಗಾಳಿ ಸೆರಗಿನಲಿ ಹೋಳುಪಡೆಯುತಲಿ ಮುಗಿಲು ಸಿಡಿಯುವಂತೆ
ನನ್ನ ಬಾಳಿನಲಿ ಚಿನ್ನೆ ಸಾಗಿದಳು ತಾರೆ ಮುರಳುವಂತೆ !

ಹಗಲು ಬರುವುದೋ ? ಇರುಳು ಕಳೆವುದೋ ? ಆಸೆ ಉಕ್ಕ
ಲಹುದೋ ?
ಬಾಳ ತುಂಬಿರುವ ಗೋಳ ಮರೆಯುತಲಿ ನಾಳೆ ಒಕ್ಕಲಹುದೊ ?
ಚಿಂತೆ ಚಿತೆಗೆ ಬಲಿ ನಿಂತು ಉರಿಯುತಿಹ ತವಕಗೊಂಡ ಮನವ
ಶಾಂತಗೊಳಿಸಲೆಂದೆಂತು ನಡೆಸಿದರು ಕಾಣಲಿಲ್ಲ ಹಗಲ !

# ಸುಂದರ ಉಷಾ ಸ್ವಪ್ನ

ಮುಗಿಲ ಹಣೆಯಲಿ ಹೊಳೆವ ಅಳಿತಾರೆಗಳು ರವಿಯು
ಹಗಲಿನಲಿ ಹುಟ್ಟುತಿರೆ ಮಾಸಿಹೋಗುವ ತೆರದಿ,
ಭಾವಗಳು, ಬಯಕೆಗಳು, ನೂರಾರು ಚಿಂತೆಗಳು,
ಕನಸು ಮನವಾವರಿಸೆ, ಒಲವ ಸುಂದರ ರವದಿ
ಮಾಯುವಾಗುತಲಿಹವು. ಉರುಳಿರುವ ತಾರೆಗಳ
ಗತಿಯು ಕೇಳುವುದೇಕೆ ? ಹಗಲಿನೆಳಬಿಸಿಲಿನಲಿ
ಹೊಳೆಯುತ್ತ, ಕುಣಿಯುತ್ತ, ಹುಲ್ಗರಿಕೆ ಪುಲ್ಕಳಿತ
ಮಂಜುಹನಿ ಮನಪಸೇ ಮರೆತಂತೆ ರಂಗಿಸಲಿ,
ಕಳೆದ ಕಾಲದ ದುಗುಡದೇಕಾಂತಗಳ ಮರೆತು,
ಒಲವಿನಾಸಂದದಲಿ, ನೀ ಬಂದು, ನನ್ನ ಉಷೆ,
ನನ್ನೊಲವನರಳಿಸಲು, ಹಿಗ್ಗಿನಲಿ ನನ್ನೆದೆಯು
ಹಿಂದೆಂದು ಕಾಣದಿಹ ಹೊಸ ಹಾಡ ಸೊಗಸ ಹಸೆ
ಹಾಸುತಿದೆ ! ಇಂದಂತೆ ಮುಂದೆಯೂ ಉಳಿದೀತೆ ?
ಸುಂದರ ಉಷಾಸ್ವಪ್ನ ಅಳಿಯದೆಯೆ ಬಾಳೀತೆ ?

# ಕನಸೊಂದ ಕಂಡೆ

ನಿನ್ನಿರುಳು ಕನಸೊಂದ ಕಂಡೆ. ಅತ್ತ ಕಡೆಯಲಿ,
ಪೂರ್ವಕ್ಕೆ, ಕೊಂಚ ಓರೆಗೆ ತೋರುತಿರಲು ಎಳೆ
ಚಂದ್ರ, ಕಿಟಕಿ ಬಳಿಯೇ ಕುಳಿತೆನ್ನ ಮುಂಗಡೆಗೆ
ಕಂಬಿಗಳ ನೆರಳು ಮಲಗಿತ್ತು. ಅತ್ತಿತ್ತ ತುಸು
ಬೆಳಕು. ಪಕ್ಕದಲ್ಲಾವುದೋ ಕಿರುಗತೆಯ ಬೆಳೆ
ಕೂಡಿಸಿದ ಸಣ್ಣ ಕತೆಗಳ ಕೂಟ. ಅದು ಸರಿದು
ಯಾವುದೋ ನದಿತೀರದಲಿ ಕುಳಿತಂತೆ. ಬೆಳಕು
ಆಗಲೇ ಕಾದು ಬೆಳ್ಳಿಯಾಗಿತ್ತು. ಪಕ್ಕದಲಿ
ನನ್ನೊಲವು, ಬಲು ದಿನಕೆ ಹಿಂದೆ ನನ್ನನು ಅಗಲಿ
ಹಾರಿಹೋದವಳಿಂದು ನನ್ನ ಬಳಿ ಕುಳಿತುದಕೆ
ಮನಕಾವ ಸಂಶಯವೂ ತೋರದು ; ಅದನವಳ
ಕೇಳುವೆನು ಎಂದೆನುವ ತವಕವೂ ಬರಲಿಲ್ಲ.
ನಾನವಳ ಮೊದಲ ದಿನ ಕಂಡ ಸವಿನೆನಪಿನಲಿ,
ನಗೆಗಾಗಿ, ನನ್ನೊಲವ ಕುರುಹೆಂದು ಕೊಟ್ಟ ಕಿರು-
ಕನ್ನಡಿಯಲಿಬ್ಬರೂ ಚಂದ್ರಬಿಂಬವ ಕಂಡು
ಒಬ್ಬರೊಬ್ಬರ ನೋಡಿ, ಮೋಡಿಯಾ ಗುಂಗಿನಲಿ,
ವೀಳೆಯವ ಮೆಂದ್ಬೊಡನೆ ಸೊಕ್ಕಿ, ತಲೆ, ಎರಡು ಚಣ
ಹಂಗುಗಳ ಮರೆತು, ಹಾಯಿಯಲಿ ಹರಿದಾಡುವೊಲು,
ಹರಿದೆವು. ಚಂದ್ರಬಿಂಬ ಕನ್ನಡಿಯ ಕಟ್ಟಿನಲಿ
ಸವಿಗಟ್ಟಿ ಸಿಕ್ಕಿತ್ತು. ನನ್ನವಳ ಕಂಗಳಲಿ
ಹಿಗ್ಗಿತ್ತೊ ಏನೊ ಆದ ಕಾಣೆ. ಎಂತೋ ಏನೋ
ಮನಸು ಮಿಡುಕಿನಲೆ ಮಾಧುರ್ಯವಿಳಿಸಿಕೊಂಡದ
ಸವಿದಿತ್ತು.

ಒಂದೆ ಚಣ! ಕನ್ನಡಿಯು ಕೈಜಾರಿ

ನೂರು ಚೂರಾಗೊಡೆದು, ಸಿಡಿದು, ಪುಡಿಯಾಗಲ್ಲಿ
ಸುತ್ತೆಲ್ಲ ಕೋರೈಸಿ ಬಿತ್ತು. ಒಂದೊಂದು ಅಣು
ಗಾಜಿನಲಿ ಒಂದೊಂದು ಚಂದ್ರಬಿಂಬ ತೋರಿತು ;
ಚಕಮಕಿಯ ಕಲ್ಲಿನಿಂ ಕಿಡಿ ನೂರು ಹಾರಿದೊಲು
ಚಂದ್ರ ತನ್ನಾಟೋಪದಲಿ ಕಳುಹಿಸಿದ ಮಿಣುಕ ಕಿಡಿ
ಎನುವಂತೆ ಬೆಳಗಿದುವು ; ನೂರು ಕತ್ತಿಯ ಹೊಳಪು
ಒಮ್ಮೆಗೇ ಚಕಚಕಿಸಿ ಕಣ್ಗೆ ಕಂಗಾಲತೆಯ
ತರುವಂತೆ, ನದಿಯ ಅಲೆಗಳ ನೂರು ಏರಿನಲಿ
ಶಶಿಗಿರಣ ಮಿಂಚಾಯ್ತು! ಕನ್ನಡಿಯು ಒಡೆದಿರಲು
ಹೃದಯವೇ ಬಿರಿದಂತೆ ನನಗಾಯ್ತು! ಅದನರಿತೊ
ಏನೋ, ಅಂತು, ಜತೆಗಾತಿ ನಸುನಕ್ಕು, ತುಟಿಯ
ಓರಯಿಸಿ ಸಂತವಿಸೆ ಹೇಳಿದಳು—''ನಿಮ್ಮೊಲವ
ಕುರುಹು ಈ ಕನ್ನಡಿ. ಅದು ಒಡೆದು ಚೂರಾಯ್ತು!
ಆದರದು ಒಂದಲ್ಲ, ನೂರು ಬಿಂಬಗಳ ನೆಲೆ!
ಅಂತೆ ನಾ ನಿಮ್ಮನ್ನು ಕೆಲವು ದಿನ ಬಿಟ್ಟಿರಲು,
ಹೃದಯವೇ ವಿರಹದಲಿ ಸಿಡಿದು ನೂರಾಗಿರಲು,
ನೂರು ಬಗೆಯಲಿ, ನೂರು ಹಾಡುಗಳ ರೂಪದಲಿ,
ನನ್ನ ಪ್ರತೀಕವನು ರೂಪಿಸಿದೆ. ನಿಮ್ಮನ್ನು
ಬಿಟ್ಟಂತ ಸೋಗಿನಲಿ, ನಾನೆ ನಿಮ್ಮವಳಾದೆ!
ಒಂದು ನಾನಾದವಳು, ನೂರು ನಾದದ ನೆಲೆಯ
ಸ್ಥಾಯಿಯಲಿ ಉಳಿವಾದೆ. ನಾನು ನಿಮ್ಮೊಲವಹಂದು,
ಹೆಣ್ತನದ ಪ್ರತಿಬಿಂಬ!''—ಆವಳ ಮಾತಿಗೆ ನಾನು
ಮರುಳಾದೆ ; ಆದರೂ ಬಿಡಲಿಲ್ಲ, ಕೇಳಿದೆನು :
''ಇನ್ನು ನಾ ನಿನ್ನನ್ನು ಬಿಡಲಾರೆ ಮುಂದಕ್ಕೆ.
ಯುಗ ಕಳೆವವರೆಗೆನ್ನ ಜತೆಯೊಳಗೆ ಇರಬೇಕು,
ಇಲ್ಲದಿರೆ ಬಾಳ್ವೆಯಿದು ಸಾವಿಗಿಂತಲು ಕೀಳು ''
ಆದ ಕೇಳಿ, ಮುಸಿ ಮುಸಿದು ನಕ್ಕು ಹೇಳಿದಳವಳು:

''ನಿಮ್ಮೊಲವ ಮಿತಿಯೇನು ಒಂದೆ ವ್ಯಕ್ತಿಗೆ ಸಾಕೆ ?
ಅದರ ಮಿತಿ ಜಗದ ಮಿತಿ, ಕಲ್ಪನೆಯು ಮಿತಿಯನೂ
ಮೀರಿ ಅದರಾಡಳಿತ ; ಅಂತಹಾ ಒಲವಿನಲಿ
ಜಗದೆಲ್ಲವನು ಬಾಚಿ ತಬ್ಬಿ ತನ್ನೊಳಗಿಡುವ
ಶಕ್ತಿಯಿದೆ. ಅದು ಮರೆತು, ಯಾವುದೋ ಅರೆಗನಸು
ಮರೆಯಾಗೆ, ಅದ ಕುರಿತು ಚಿಂತಿಸುತ ಕುಳ್ಳಿಹರೆ
ಆಯಿತೇ ? ನಾನು ಬಗೆ ಬಗೆ ರೂಪ ಧರಿಸುವೆನು,
ಬಗೆ ಬಗೆಯ ರೀತಿಯಲಿ ಬಂದೇನು, ಹೋದೇನು !
ವಿಧ ವಿಧದ ಸೃಷ್ಟಿಯನು ಕಲ್ಪಿಸುವೆ–ಕೊಂದೇನು !
ನನಗೆ ಯಾವ ಬಗೆ ಬಂಧನದ ತೊಡಕೂ ಇಲ್ಲ.
ಅದಕಾಗಿ ಹಿಂದೊಂದು ಹೆಣ್ಣಿನಾಕೃತಿ ಧರಿಸಿ
ನಿಮ್ಮ ಬಳಿ ಬಂದೆನ್ನ ಮೋಡಿಯನು ಹಾಕಿದ್ದೆ;
ಆ ಗುಂಗಿನಲಿ ನೀವು ಗೀತಗಳ ಹಾಡಿದಿರಿ.
ಇಂದು ವಿರಹದ ರೂಪ ತಾಳಿ ಬಂದೆನು ; ಮುಂದೆ
ಬೇರೊಂದು ಬಿಂಬ ಪಡೆದು ಬಂದೇನು, ಬಳಿಯಲ್ಲಿ
ನಿಂದೇನು.''

ಒಂದು ಗಳಿಗೆಯಲವಳು ಮಾಯವಾದಳು.
ಪಕ್ಕದಲಿ ಬೊಗಸೆಗಣ್ಣಿನ ಚೆಲುವೆ, ಹೊಸ ಹರಯ
ಕೊಟ್ಟ ಅಚ್ಚರಿಯ ಬಿಚ್ಚುಗಣ್ಣವಳು, ಪಿಳಿ ಪಿಳಿ
ನನ್ನನೇ ದಿಟ್ಟಿಸುತ ನಗುತಿರಲು, ಯಾರಿವಳು
ಎಂದುಕೊಂಡೆನು ಮನದಿ. ''ಹೆಣ್ತನದ ಪ್ರತೀಕ,
ಒಲವು ಪಡೆಯುವ ನೂರು ರೂಪದಲೊಂದು–
ನಾನಿಂದು ಈ ರೂಪವಾಂತು ನಿಂದೆ''—ಕಂಗಳು
ನಕ್ಕುವಾಕೆಯವು ; ಮನ ನಕ್ಕಿತು ; ನೀರು ನಕ್ಕಂತಾಯ್ತು;
ಜೀವ ನಗೆಯಿಂದ ತುಂಬಿದಂತಾಯ್ತು; ಕಾವ್ಯ
ಉಕ್ಕಿ ಹರಿದಂತಾಯ್ತು. ಲಹರಿಲಹರಿಗಳಲ್ಲಿ,

ಚಂದ್ರ ಚೂರಾದ ಅಲೆಗಳಮೃತವಾಹಿನಿಯಲ್ಲಿ
ನನ್ನೆಲ್ಲ ಕನಸುಗಳೂ ಕಣಿದುವು. ಕೆಳಗುರುಳಿ
ಚೂರಾದ ಕನ್ನಡಿಯು ನೂರುಗಳಲೂ ನೂರು
ನಮ್ಮಿಬ್ಬರ ಚಿತ್ರ ಜತೆ ಕಂಡುವು. ಉಮ್ಮಳಿಸಿ
ಭಾವ ಬಿಚ್ಚಿತು. ಕನಸು ಒಡೆಯಿತು. ಕಣ್ಣು
ಬೆಚ್ಚಿ ಜಗಕಿಳಿಯಿತು. ಆಕಾಶವನು ಹರಿದು
ಅದರಿಂದ ಇಣುಕಿ ನೋಡುತ್ತಿದ್ದ ಬಾಲರವಿ !

# ಮೊದಲ ನುಡಿ

ತಮ್ಮ 'ಉಷಾ ಸ್ವಪ್ನ'ದ ಕೆಲವು ಅನುಭವಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುವ ವೇಳೆಯಲ್ಲಿ ಬೆಂಬಲದ ಹರಕೆ ನನ್ನಿಂದ ಸಲ್ಲಬೇಕೆಂದು ಶ್ರೀಮರ್ಾ ಅನಂತನಾರಾಯಣ ಅವರು ಕೋರಿದ್ದಾರೆ. 'ಮುನ್ನುಡಿ'ಗಳಲ್ಲಿ ನನಗೆ ಹೆಚ್ಚಿನ ನಂಬಿಕೆಯಿಲ್ಲ. ಕೆಲವು ಅಪೂರ್ವ ಸಂದರ್ಭಗಳಲ್ಲಿ ಹೊರತು ಅವುಗಳಿಂದ ಕೃತಿಗಳಿಗೆ ಉತ್ಕರ್ಷವೊದಗುವ ಸಂಭವ ಬಲು ಕಡಿಮೆ. ಆದರೂ ಈ ತರುಣ ಮಿತ್ರರ ವಿಶ್ವಾಸಕ್ಕೆ ಕಟ್ಟುಬಿದ್ದು, ಅವರ ಪ್ರಾರ್ಥನೆಯು ಒಕ್ಕಣೆಗೆ ಮನ ಸೋತು, ಈ ಅಭ್ಯಾಸವಿಲ್ಲದ 'ಪೌರೋಹಿತ್ಯ'ಕ್ಕೆ ಅಳುಕಿನಿಂದಲೇ ಒಪ್ಪಿಕೊಂಡಿದ್ದೇನೆ.

ಇಲ್ಲಿ ಜೊತೆಗೂಡಿರುವ ಕವನಗಳಲ್ಲಿ ಹೆಚ್ಚು ಕಡಿಮೆ ಎಲ್ಲವೂ ಪ್ರೇಮಗೀತೆಗಳು, ಯೌವನದ ಪ್ರೇಮದಲ್ಲಿ ಆಕಾಂಕ್ಷೆ, ನಿರೀಕ್ಷೆ, ಉದ್ರೇಕ, ಉಲ್ಲಾಸ-ಇಂಥ ಭಾವಗಳೇ ಹೆಚ್ಚು. ವಿಷಾದ ನಿರಾಶೆಗಳು ಮೂಡಿದರೂ, ಹೃದಯವನ್ನು ತಲ್ಲಣಗೊಳಿಸಿದರೂ ಅವು ನೆಲೆಯಾಗಿ ನಿಲ್ಲತಕ್ಕವಲ್ಲ, ಉತ್ತರಕ್ಷಣದಲ್ಲಿ ಮತ್ತೆ ಭರವಸೆ ತಲೆಯೆತ್ತುವುದೇ ಸಾಮಾನ್ಯ. ಆದರೆ, ಲೋಕದಲ್ಲಿ ತರುಣ ಪ್ರೇಮಿಗೆ ಒದಗಬಾರದ ಮಹಾನಷ್ಟ ಶ್ರೀಮರ್ಾ ಅನಂತನಾರಾಯಣ ಅವರ ಭಾಗಕ್ಕೆ ಅನಿರೀಕ್ಷಿತವಾಗಿ ಬಂದಿತು. ಪ್ರೇಮದ ದಳಗಳಿನ್ನೂ ಅರಳುತ್ತಿರುವಾಗಲೇ, ಸುಖದ ಹೊಂಗನಸುಗಳು ಸಿದ್ಧಿಸುವ ಮೊದಲೇ, ಪ್ರೇಯಸಿ ಪರಲೋಕಕ್ಕೆ ನಡೆದಳು. "ಮದುವೆಯಾಯಿತು ಉಷೆಗೆ ಮಸಣ ಮಂಟಪದಲ್ಲಿ". "ಹೋದಳುಷೆ-ಬಂತು ನಿಶೆ" : ನಡುವಣ ಹಗಲಿನ ಅನುಭವವೇ ತನಗೆ ಇಲ್ಲವಾಯಿತು! ಜೀವನದ ದಾರಿ ನಾಲ್ಕು ಹಜ್ಜೆಗೇ ತಪ್ಪಿ ಹೋಯಿತು! ಹೀಗೆ ಬಡಿದ ಸಿಡಿಲಿನಿಂದ ಕವಿಯ ಹೃದಯ ಬಿರಿದು ಹೋದರೂ ಅದರ ಆಳದಿಂದಲೇ ರಸದ ಚಿಲುಮೆ ಉಕ್ಕಿದೆ. ಇದೇ ಕಾವ್ಯದ ಪವಾಡ ; "ಶೋಕಃ ಶ್ಲೋಕತ್ವಮಾಗತಃ!" ತಾರುಣ್ಯದ ಪ್ರೇಮಭರದಲ್ಲಿ

ಅಸಾಮಾನ್ಯವೆನಿಸುವ ಆಳದ ನೋವಿನ, ನಿತ್ಯನಿರಾಶೆಯ ಗೀತೆಗಳು ಈ ಕವಿಯ ಕೊರಳಿನಿಂದ ಹೊಮ್ಮಿವೆ. "ಜಗದ ವೀಣೆಯು ನುಡಿಯುತಿರುವುದು, ನನ್ನವೀಣೆಯು ನುಡಿಯದು."– ಈ ಪಲ್ಲವಿಯೇ ಸುಂದರವಾದ ಹಾಡೊಂದನ್ನು ಕಟ್ಟಿದೆ.

ನೋವು ಹೃದಯದ ಸ್ಥಾಯಿಯಾಗಿರುವಾಗ, ಎತ್ತ ತಿರುಗಲಿ, ಏನನ್ನೇ ನೋಡಲಿ–ಹಳೆಯ ನೆನಪುಗಳು ಕೆರಳುತ್ತವೆ. ಎಳೆಯ ಮಕ್ಕಳ ಕಣ್ಣು ಮುಚ್ಚಾಲೆಯ ಆಟವನ್ನು ನೋಡಿದರೆ, ನಾವಿಬ್ಬರೂ ಎಳೆತನದಲ್ಲಿ ಆಡಿದ್ದು ಒಳಗಣ್ಣ ಮುಂದೆ ಸುಳಿಯುತ್ತದೆ. ಆದರೆ, "ಆಕೆ ಅವಿತಿಹಳೆಲ್ಲೊ, ಕಾಣೆ!" ರಮ್ಯ ಪ್ರಕೃತಿಯ ದರ್ಶನವೆಲ್ಲ ಆಕೆಯ ನೆನಪಿಗೇ ದಾರಿಮಾಡಿಕೊಡುತ್ತದೆ. ಅಷ್ಟೇಕೆ, ನೋವಿನ ಹಿನ್ನೆಲೆಯಿಂದ ವಸ್ತುಸ್ವರೂಪವೇ ಹೊಸ ರೀತಿಯಲ್ಲಿ ಗೋಚರಿಸುವುದೂ ಉಂಟು :

"ಬಾನಲಿ ಬೆಳುದಿಂಗಳ ಕುಡುಗೋಲು
ತಂಪು ಸಿಡಿಲಿನೂಲು ಸಾಗಿರಲು
ಹೃದಯ ಎಲ್ಲಿಯೋ ದೂರ ಹಾರಿರಲು
ನೆನಪೇತಕೆ ಬರುವುದೊ ನಾನರಿಯೆ!"

"ನೆನಪೇತಕೆ ಬರುವುದೊ!"–ಇನ್ನೇತಕ್ಕೆ? ವಿಯೋಗಿಗೆ ಅದೊಂದೇ ತಾನೆ ಜೀವಾಧಾರ!

ಶ್ರೀಮಾನ್ ಅನಂತನಾರಾಯಣ ಅವರು ಇನ್ನೂ ತರುಣರು. ವೇದನೆಗೆ ಹೃದಯವನ್ನು ಒಗ್ಗಿಸಿಕೊಂಡು, ಬಾಳಿನ ನಂಜನ್ನು ಕಾವ್ಯ ರಸವಾಗಿ ಹಿಂಡಿ ಕೊಂಡಿರುವುದಕ್ಕಾಗಿ ಅವರ ಧೈರ್ಯವನ್ನು ಸಹೃದಯರು ಶ್ಲಾಘಿಸಬೇಕು. ಇಲ್ಲಿಯ ಎಲ್ಲ ಪದ್ಯಗಳಲ್ಲೂ, ಭಾವದ ಸಿರಿಯೂ ಭಾಷೆಯ ಬಿಗಿಯೂ ಛಂದಸ್ಸಿನ ಬಂಧವೂ ಒಂದೇ ಹದದಲ್ಲಿ ಸಾಧಿಸಿವೆಯೆಂದು ನಾನು ಹೇಳುತ್ತಿಲ್ಲ. ಆ ಭಾವನೆ ಕವಿಗಳಿಗೂ ಇಲ್ಲವೆಂದು ನಾನು ಬಲ್ಲೆ. ಅವರದು ಪಳಗುತ್ತಿರುವ

ಕೈ; ಬೆಳೆಯುತ್ತಿರುವ ಕಲೆ. ಒಳ್ಳೆಯ ಕಾವ್ಯಕ್ಕೆ ಅನುಭವದ ಕಾವು ಅತ್ಯಗತ್ಯ. ತಮ್ಮ ಪಾಲಿಗೆ ಬರಬೇಕಾದದ್ದಕ್ಕಿಂತ ಮಿಗಿಲಾಗಿಯೇ ಜೀವನ ಕ್ಲೇಶಗಳನ್ನು ಶ್ರೀಮಾನ್ ಅನಂತನಾರಾಯಣ ಅವರು ಅರಿತಿದ್ದಾರೆ. ಸ್ವಕೀಯ ದುಃಖದಲ್ಲಿಯೇ ಮುಳುಗಿಬಿಡದೆ, ದೇಶಹಿತದ ಕಾರ್ಯಗಳಲ್ಲಿ ಉತ್ಸಾಹದಿಂದ ಭಾಗವಹಿಸಿ ಲೋಕಾನುಭವವನ್ನು ಹೆಚ್ಚಿಸಿಕೊಂಡಿದ್ದಾರೆ, ಆತ್ಮಸಂಸ್ಕಾರವನ್ನು ಪಡೆಯುತ್ತಿದ್ದಾರೆ. ಅವರ ಗಾಢ ವಿಶಾಲವಾದ ಅನುಭವ ಇನ್ನೂ ಪರಿಪಾಕಗೊಳ್ಳಲಿ, ಕಲೆ ಇನ್ನೂ ಹದವಾದ ಫಲವನ್ನು ನಮ್ಮ ಜನಕ್ಕೆ ಕೊಡಲಿ.

ಬೆಂಗಳೂರು — ತೀ. ನಂ. ಶ್ರೀಕಂಠಯ್ಯ

೧-೪-೧೯೪೮

# ಬಿನ್ನಹ

ಇದು ನನ್ನ ಗೀತಗಳ ಎರಡನೆಯ ಸಂಕಲನ. ಇಲ್ಲಿ ಕೊಡಿರುವ ಗೀತೆಗಳಲ್ಲಿ ಹೆಚ್ಚು ಪ್ರೇಮ ಗೀತಗಳು–ವಿರಹ ಗೀತಗಳು. ಪ್ರೇಮ ಹೊಸತಲ್ಲ ; ವಿರಹ ಹೊಸತಲ್ಲ ; ಅಂತೆಯೇ ಪ್ರೇಮ ಗೀತವೂ ವಿರಹ ಗೀತವೂ ಅನಾದಿಯಿಂದ ಬಂದುವು. ನನ್ನ ಈ ಗೀತಗಳು ಪ್ರೇಮದ ಅನಂತ ಪ್ರವಾಹದಲ್ಲಿ ತೇಲಿಬಿಟ್ಟ ಕಾಗದದ ದೋಣಿಗಳು. ನನ್ನ ನೋವಿನಲ್ಲಿ, ನನ್ನ ಸಮಾಧಾನಕ್ಕಾಗಿಯೋ, ನೋವಿನದೇ ಸವಿಗಾಗಿಯೋ ಹಾಡಿಕೊಂಡ ಗೀತಗಳು ಇವು. ನನ್ನ ಹೃದಯಕ್ಕೆ ಬಹಳ ಆಪ್ತರಾದವರು ಇವುಗಳನ್ನು ನನ್ನಿಂದ ಹಾಡಿಸಿ ಮೆಚ್ಚಿಗೆ ತೋರಿದಾರೆ ; ಸಹಾನುಭೂತಿ ನೀಡಿದಾರೆ. ಇವುಗಳಲ್ಲಿ ಕೊನೆಯ ಕವಿತೆ ೧೯೪೮ರ ಕೃತಿ. ಉಳಿದವುಗಳಲ್ಲಿ ಒಂದೆರಡನ್ನುಳಿದು ಮಿಕ್ಕುವೆಲ್ಲ ೧೯೪೫-೪೭ರಲ್ಲಿ ಬರೆದವು. ಈ ಹಾಡುಗಳನ್ನಿಂದು ಬಹಳ ನಮ್ರತೆಯಿಂದ ಕನ್ನಡಕುಲ ರಸಿಕರ ಕೈಯಲ್ಲಿಡುತ್ತಿದ್ದೇನೆ.

ಈ ಗೀತಗಳಲ್ಲಿ ಹಲವಾರು ಈಗಾಗಲೇ ‘ಪ್ರಬುದ್ಧ ಕರ್ಣಾಟಕ’ದಲ್ಲಿಯೂ, ‘ಪ್ರಜಾಮತ’ದಲ್ಲಿಯೂ ಬೆಳಕು ಕಂಡಿವೆ. ಇವುಗಳಿಗೆ ಮೊದಲು ಆಶ್ರಯಕೊಟ್ಟ ಪತ್ರಿಕೆಗಳಿಗೆ ನಾನು ಋಣಿ. ಮಹಾರಾಜಾ ಕಾಲೇಜು ಮತ್ತು ಇಂಟರ್ಮೀಡಿಯೆಟ್ ಕಾಲೇಜಿನ ಗೆಳೆಯ ಗೆಳತಿಯರು ನನಗೆ ಬಹಳ ಬೆಂಬಲ ಕೊಟ್ಟಿದಾರೆ. ಹಲವಾರು ಸಂದರ್ಭಗಳಲ್ಲಿ ನನ್ನಿಂದ ಈ ಗೀತಗಳನ್ನು ಹಾಡಿಸಿದಾರೆ. ನನಗೆ ಮನ್ನಣೆ ತೋರಿದಾರೆ. ಅವರಿಗೆಲ್ಲ ನನ್ನ ನೆನಕೆಗಳು. ಪೂಜ್ಯ ವಿ. ಸೀತಾರಾಮಯ್ಯನವರು ನನ್ನ ಬಗ್ಗೆ ತೋರಿರುವ ವಿಶ್ವಾಸ ಮಮತೆಗಳನ್ನು ನಾನೆಂದಿಗೂ ಮರೆವಂತಿಲ್ಲ. ಅವರ ಬೆಂಬಲವಿಲ್ಲದಿದ್ದರೆ ನಾನು ಒಂದು ಹೆಜ್ಜೆಯಿಡಲೂ ಆಗುತ್ತಿರಲಿಲ್ಲ. ಅವರ ಅಪಾರ ಸಹಾನುಭೂತಿ, ಪ್ರೇರಣೆ, ಮಮತೆಗಳಿಗೆ ನಾನು ಅವರಿಗೆ ಕೃತಜ್ಞ. ನೋವಿನ ಹೃದಯಕ್ಕೆ ನಲುಮೆಯ ಇಂಬುಗೊಟ್ಟು, ಗೆಳೆತನದ ಅಮೃತದ ಹೊಳೆ

ಹರಿಸಿದ ನನ್ನ ಮೂವರು ಗೆಳೆಯರು–ಹೆಸರೆತ್ತಿದರೆ ಹುಷಾರೆಂದು ಹೆದರಿಸಿರುವ–ಮೂವರು ಗೆಳೆಯರಿಗೆ ಹೀಗಾದರೂ ನನ್ನ ಪ್ರೇಮ ಸಲ್ಲಿಸುತ್ತೇನೆ. ನಾನು ಎಷ್ಟೇ ತೊಂದರೆ ಕೊಟ್ಟರೂ ಮನ್ನಿಸಿ, ನಾನು ಪತ್ರ ಬರೆದೊಡನೆಯೇ 'ಮೊದಲ ನಂಡಿ' ಬರೆಯಲೊಪ್ಪಿ, ನನಗೆ ಹರಕೆ, ಬೆಂಬಲ ಕೊಟ್ಟಿರುವ ಪೂಜ್ಯ ತೀ. ನಂ. ಶ್ರೀಕಂಠಯ್ಯನವರಿಗೆ ನನ್ನ ಹೃದಯಂದ ಕೃತಜ್ಞತೆಯನ್ನರ್ಪಿಸುತ್ತೇನೆ. 'ಇದನ್ನು ಅಚ್ಚುಮಾಡಿ ಪ್ರಕಟಿಸಿದ ಗೆಳೆಯ ರಾ. ನಾ. ಹಬ್ಬು ಅವರಿಗೆ ನಾನು ಆಭಾರಿಯಾಗಿದ್ದೇನೆ.

ಒಲವಿನ ಹಬ್ಬದಲ್ಲಿ ನೂರು ಬೆಳಕು ಹಚ್ಚಿಡುತ್ತಾರೆ. ಆ ನೂರರ ನಡುವೆ ನನ್ನ ಈ ಕಿರು ಸೊಡರನ್ನು ತೇಲಿಬಿಟ್ಟಿದೇನೆ. ಪ್ರೇಮದ ಅನಂತ ಪ್ರವಾಹಕ್ಕೆ ಇದು ನನ್ನ ಕಿರು ಕಾಣಿಕೆ.

ಮಹಾರಾಜಾ ಕಾಲೇಜು
ಮೈಸೂರು — ಎಸ್. ಅನಂತನಾರಾಯಣ
ಸರ್ವಧಾರಿ ಸಂವತ್ಸರ, ಉಗಾದಿ
೧೦-೪-೧೯೪೮

# ನೆನಪು

1943. ಒಂದು ಸಂಜೆ ಬೆಂಗಳೂರಿನ ಮಲ್ಲೇಶ್ವರ ಬಡಾವಣೆಯಲ್ಲಿ ಒಬ್ಬ 17-18 ವರ್ಷದ ಯುವಕ ಇದ್ದಕ್ಕಿದ್ದಂತೆ ಇಳಿದ ಭಾರೀ ಮಳೆಗೆ ಸಿಕ್ಕಿಕೊಂಡ. ಮೈಮೇಲಿದ್ದ ಖಾದಿಯ ಜುಬ್ಬಾ ಮತ್ತು ತೊಟ್ಟ ಪೈಜಾಮಾ ಎರಡೇ ನಿಮಿಷದಲ್ಲಿ ಪೂರಾ ಒದ್ದೆಯಾಗಿ ಹೋದವು. ಅಲ್ಲೇ ಹತ್ತಿರದ ಒಂದು ಮನೆಯ ಜಗಲಿಯನ್ನೇರಿ ನಿಂತ. ಮಳೆಯಂತೂ ರಭಸದಿಂದಲೇ ಬಾರಿಸುತ್ತಿತ್ತು-ಗುಡುಗಿನ ನಗಾರಿ ಮಿಂಚಿನ ಛಟಿಲ್‌ಚಾವಟಿಯೇಟು! ಗಾಳಿಯು ಸುಯ್ಯನೆ ಬೀಸಿದಾಗ ಮಳೆಯ ಹನಿಗಳ ಎರಚಲು ತುಂತುರುತುಂತುರಾಗಿ ಜಗಲಿಯ ಮೇಲೂ ರಾಚುತ್ತಿತ್ತು. ತೊಯ್ದ ಬಟ್ಟೆಯಿಂದ ನೀರು ತೊಟ್ಟಿಕ್ಕುತ್ತಿತ್ತು. ಮಳೆಯ ದಾಳಿಯ ವಿರುದ್ಧ ರಕ್ಷಣೆಯೇ ಇಲ್ಲವೆನಿಸಿತ್ತು.

"ಒಳಕ್ಕೆ ಬಂದು ನಿಂತುಕೊಳ್ಳಿ" ಎಂದು ಹಿರಿಯರು ಬಾಗಿಲು ತೆಗೆದು ಕರೆದರು. ಯುವಕ ತನ್ನ ಪೈಜಾಮದಿಂದ ಜಿನುಗುತ್ತಿದ್ದ ನೀರನ್ನು ಹಿಂಡಿ-ಒಳಕ್ಕೆಹೋದಾಗ, "ತುಂಬಾ ನೆನೆದ ಹಾಗಿದೆ" ಎಂದು ಹಿರಿಯರು ತಮ್ಮ ಮಗಳನ್ನು ಟವಲ್ ತರಲು ಕಳುಹಿಸಿದರು. ಆಗ ಹುಡುಗಿ ಟವಲು ತಂದು ಕೊಟ್ಟು ಅಲ್ಲೇ ನಿಂತಳು. ತಲೆಯನ್ನು ಆ ಟವಲಿನಲ್ಲಿ ಒರೆಸಿಕೊಂಡ ಯುವಕ ಕೃತಜ್ಞತೆಯಿಂದ ಆ ಕಡೆ ನೋಡಿದಾಗ, ಆ ಹುಡುಗಿಯ ಬೊಗಸೆ ಕಣ್ಣುಗಳಲ್ಲಿ ಕೀಟಲೆಯ ನಗು ಚಿಮ್ಮಿತು- "ಇದು ಖಾದಿ ಟವಲಲ್ಲ" ಎಂದು ಸ್ವಲ್ಪವೇ ನಸುನಕ್ಕಳು ಆ ಹುಡುಗಿ. 15 ವರ್ಷ ಪ್ರಾಯದ ಹುಡುಗಿ ತುಂಬಾ ಚೆಲುವೆ, ತಮಾಷೆಮಾಡಿದಾಗಿನ ನಸುನಗು ತುಟಿಯ ಮೇಲೆ ಕುಣಿದಾಗ, ಬೊಗಸೆಕಣ್ಣುಗಳೂ ನಗೆ ಚೆಲ್ಲಿದಾಗ, ಹಿರಿಯರು ಜೋರಾಗಿಯೇ ನಕ್ಕರು. "ಪರವಾಗಿಲ್ಲ" ಎಂದು ಯುವಕ ಹೇಳಲು ಪ್ರಯತ್ನಿಸಿದ, ಆದರೆ ಮಾತು ಬರಲಿಲ್ಲ, ಆ ಹುಡುಗಿಯ ಕಡೆಗೊಮ್ಮೆ ನೋಡಿದ. ಆ ನಸುನಗೆಯ ಬುಗ್ಗೆಯಲ್ಲಿ ಕೇವಲ ಮುಗ್ಧತೆ ಇದ್ದು, ಕಣ್ಣಿನಿಂದ ಚೆಲ್ಲಿದ ನಗೆ ಮನಸೆಳೆಯಿತು.

ಸ್ವಲ್ಪ ಹೊತ್ತಿನ ನಂತರ ಮಳೆ ನಿಂತ ಕೂಡಲೆ ಅವರಿಗೆ ಹೇಗೋ ವಂದನೆ ಸಲ್ಲಿಸಿ ಯುವಕ ಅಲ್ಲಿಂದ ಹೊರಟುಹೋದ.

ಮತ್ತೆ ಕೆಲವು ತಿಂಗಳ ನಂತರ ಬೆಂಗಳೂರಿಗೆ ಹೋದಾಗ, ಆತ ಬಂದಿದ್ದ ಕೆಲಸ ಮುಗಿದ ನಂತರ, ಮನಸ್ಸು ಮಲ್ಲೇಶ್ವರದ ಆ ಮನೆಯ ಕಡೆಗೆ ಕಾಲು ಗಳನ್ನು ತಿರುಗಿಸಿತು. ಈ ಬಾರಿ ಹಿರಿಯರು ಬಾಗಿಲ ಬಳಿ ನಿಂತಿದ್ದವರು ಗುರುತು ಹಿಡಿದು ಒಳಕ್ಕೆ ಕರೆದರು. ನಸುನಗೆ ತುಂಬಿದ ಬೊಗಸೆಗಣ್ಣಿನ ಹುಡುಗಿ ಆಗ ಒಳಕೋಣೆಯಿಂದ ಅಲ್ಲಿಗೆ ಬಂದಳು. ಈಗ ಹಿಂದಿನ ದಿನ ನೆನಪಾಗಿ ಕೆನ್ನೆಯಲ್ಲಿ ನಾಚಿಕೆಯ ಕೆಂಪು ಮೂಡಿತು. "ನಮಸ್ಕಾರ" ಎಂದು ಯುವಕ, ಹಿರಿಯರಿಗೆ "ಆ ದಿನ ನೀವು ಮಳೆಯಿಂದ ನನ್ನನ್ನು ಕಾಪಾಡಿದಿರಿ, ಸರಿಯಾಗಿ ವಂದನೆ ಸಲ್ಲಿಸುವುದನ್ನೂ ಮರೆತು ನಾನು ಹೊರಟುಹೋದೆ. ಗೌರವದ ನಡತೆ ನನಗೆ ಇಲ್ಲವೆಂದು ಕೊಂಡಿರೋ ಏನೋ",ಎಂದು ಮೃದುವಾಗಿ ಹೇಳಿದ. "ಅಂತಹುದೇನೂ ಇಲ್ಲ. ಹೊರಗೆ ನೆನೆಯುತ್ತಿದ್ದವರನ್ನು ಒಳಕ್ಕೆ ಸಹಜವಾಗಿಯೇ ಕರೆದೆ.ನೀವೇನೂ ಅಗೌರವವಾಗಿ ನಡೆಯಲಿಲ್ಲ. ಹಾಗೆ ನೋಡಿದರೆ ನನ್ನಮಗಳೇ ನಿಮ್ಮ ಖಾದಿ ಬಟ್ಟೆಯ ಬಗ್ಗೆ ತಮಾಷೆಮಾಡಿದಳು. ಅವಳದೇ ತಪ್ಪು ನಡತೆ" ಎಂದರು ಹಿರಿಯರು. "ಏನಿಲ್ಲ ಅದೂ ಸಹಜ ವಾಗಿಯೇ-ತುಂಟತನದ ನಗೆಮಾತಲ್ಲವೇ" ಎಂದು ಯುವಕ ನಕ್ಕ. ಹಿರಿಯರೂ ನಕ್ಕರು. ಹುಡುಗಿಯ ಮುಖ ಮತ್ತೂ ಕೆಂಪಾಯಿತು. ಬೊಗಸೆಗಣ್ಣಿನಲ್ಲಿ ಕಂಡೂ ಕಾಣದಂತೆ ಹನಿ ಮೂಡಿತು. ಕೆಳಗುರುಳದ ಹನಿಯಲ್ಲಿ ಕಂಗಳು ಏನೋ ಹೇಳುವಂತೆ ಯುವಕನಿಗೆ ತೋರಿತು. ಈಗ ಮನಸ್ಸು ಮಾರು ಹೋಯಿತು.

ಇದಾದನಂತರ–ಇದನ್ನು ಬಾಲಿಶಪ್ರೇಮ-calf-loveಎಂದು ಕರೆದರೂ ಸರಿ–ಯುವಕನಲ್ಲಿ ಮೂಡಿತು. ಬೆಂಗಳೂರಿಗೆ ಹೋದಾಗ, ಅವರು ಹೇಳಿದಂತೆ "ಆಗಾಗ ಬರುತ್ತಾ ಇರಿ" ಎಂಬುದೂ ಸಾಕಷ್ಟು ನೆಪವಾಗಿ, ಅಲ್ಲಿಗೆ ಒಂದು ಭೇಟಿ. ಅವನಿಗೆ ಅದು ತುಂಬಾ ಹಿತವಾಗಿರುತ್ತಿದ್ದುದು ನಿಜ, ಹಿರಿಯರಿಗೂ ಅದು ಸಮ್ಮತವಿತ್ತು. ಆ ಹುಡುಗಿಗೂ ಅದು ಸಂತಸದ ಗಳಿಗೆಗಳಾಗುತ್ತಿತ್ತು. 'ಮತ್ತೆ ಮತ್ತೆ ಬನ್ನಿ' ಎಂಬ ಮಾತು, ಬೊಗಸೆಗಣ್ಣಿನ ಕರೆ, ಯುವಕನಿಗೆ ಹಿತವಾದ ಹೃದಯ ಸಂವಾದವಾಯಿತು. 1942ರ 'ಕ್ವಿಟ್ ಇಂಡಿಯಾ'

ಚಳುವಳಿಯಲ್ಲಿ ಸಕ್ರಿಯ ಭಾಗವಹಿಸಿದ್ದ ಈತ ಸಾಹಿತ್ಯದ ವಿದ್ಯಾರ್ಥಿ. ಸಾಹಿತ್ಯದ ಬಗ್ಗೆ ಗಾಢವಾದ ಪ್ರೀತಿ. ಹೀಗಾಗಿ ಆ ಹುಡುಗಿ ಅವನ 'ಅಂತರಂಗದೊಂದು ಭಾವ'ವಾಗಿ ಸದಾ ಅವನಲ್ಲಿರುತ್ತಿದ್ದಳು. ಬಾಲಿಶಪ್ರೇಮ ಇಬ್ಬರಲ್ಲಿಯೂ ಗಾಢವಾಯಿತು. ಒಬ್ಬರಿಗೊಬ್ಬರು ಬೇಕು ಎಂಬಷ್ಟು ಬಲಿಯಿತು. 1945ರ ವೇಳೆಗೆ ಇಬ್ಬರೂ ಮುಂದೊಂದು ವರ್ಷದಲ್ಲಿ ಮದುವೆಯಾಗಬಹುದೆಂಬ ಆಶಯದ ಹೊಸಲು ಮುಟ್ಟಿದ್ದರು. ಈ ವೇಳೆಗೆ ಆತ ಕೆಲವು ಕವಿತೆಗಳನ್ನು ರಚಿಸಿಯೂ ಇದ್ದ.

ಆತನ ಸಹಪಾಠಿಯೊಬ್ಬಳು ಇವನ ಕವಿತೆಗಳು ತನ್ನ ಬಗ್ಗೆಯೇ ಎಂದು ತನ್ನ ಗೆಳತಿಯರಲ್ಲಿ ಸಾರಿಕೊಂಡು, ಆತ ತನ್ನನ್ನು ಪ್ರೇಮಿಸುತ್ತಾನೆಂಬ ಭ್ರಮೆಯನ್ನು ಎಲ್ಲರಲ್ಲಿಯೂ ಹರಡಿದಳು. ಆತನಿಗಿಂತಲೂ ನಾಲ್ಕು ವರ್ಷದಷ್ಟು ಹಿರಿಯಳಾದ ಆ ಸಹಪಾಠಿಯ ಚೆಲ್ಲಾಟದ ನಡೆಯನ್ನು–ಭ್ರಮೆ ಯನ್ನು–ಈತ ಇಲ್ಲವೆಂದು ಸಾರಲೂ ಪ್ರಯತ್ನಿಸಲಿಲ್ಲವೆಂಬುದು ನಿಜ. ತಮಾಷೆಗೆಂದು ಬರೆದ ಒಂದು ಸಾಧಾರಣ ಕವಿತೆ ಇಷ್ಟಕ್ಕೆಡೆಮಾಡಿಕೊಡ ಬಹುದೆಂಬ ಸೂಚನೆಯೂ ಆತನಿಗೆ ಸಿಕ್ಕಿರಲಿಲ್ಲ. ಇದು 'ಪ್ರೇಮರಗಳೆ' ಯಾಗಬಹುದೆಂದು ಅವನಿಗೆ ತೋಚಿದ್ದರೆ, ಪ್ರಾಯಶಃ ಆ ಕವಿತೆ-ಆದೂ ಬಹಳ ಸಾಧಾರಣವಾದುದು-ಯಾವುದೇ ಹುಡುಗಿಯೂ ತನ್ನ ಬಗ್ಗೆ ಬರೆದಿದೆಯೆಂಬ ಅಭಿಪ್ರಾಯ ತಾಳಬಹುದಾದಂತಹ ಸಾರ್ವತ್ರಿಕ ಗುಣವುಳ್ಳ ಕವಿತೆಯನ್ನು ಆತ ಪ್ರಕಟಿಸುತ್ತಿರಲಿಲ್ಲವೇನೋ. ಆದರೂ ಮುಂದೆ ಆ ಸಹಪಾಠಿಯ ಆ ಬಗೆಯ ಭ್ರಮೆ, ಕಲ್ಪನೆ, ಆತನಿಗೆ ಕತೆ ಹಾಗೂ ಕಾದಂಬರಿ ಬರೆಯುವಲ್ಲಿ ನೆರವಾಯಿತೆಂಬುದು ನಿಜ.

1945ರಲ್ಲಿ ಆತ ಬೆಂಗಳೂರಿನಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕ ನಾಗಿ ಬಂದಾಗ, ಬೊಗಸೆಗಣ್ಣಿನ ಹುಡುಗಿ ಆನಂದದಿಂದ ಕುಣಿದಾಡಿದ್ದು, ಕೀಟಲೆಗಾಗಿ "ನಿಮ್ಮ ಶಿಷ್ಯರ ಗತಿ ದೇವರೇ ಗತಿ" ಎಂದು ಮತ್ತೆ ನಸುನಗೆ ಯನ್ನು ತುಟಿಗಳ ಮೇಲೆ ಕುಣಿಸಿದ್ದೂ ನಿಜ. ಆಗಾಗ ಅವರ ಮನೆಗೆ ಯುವಸಾಹಿತಿ, ಯುವಅಧ್ಯಾಪಕ ಹೋಗಿ ಬೆಂಗಳೂರಿನ ಬೇಸರದ ಜೀವನ ದಲ್ಲಿ ಸಂತೋಷದ ಒರತೆಯನ್ನು ಕಂಡುಕೊಳ್ಳುತ್ತಿದ್ದ. ಕೆಲವೇ ದಿನ

ಕಳೆದಾಗ, ಇನ್ನು ಒಂದು ವರ್ಷದಲ್ಲಿ ಮನಸ್ತುಂಬಿದವರು ಮನೆ ತುಂಬಬಹು ದೆಂಬ ಆಸೆ ಭರವಸೆಯಾಗಿ ಗಟ್ಟಿಯಾಯಿತು.

ಆದರೆ "ಗುರಿಯು ಗುಡಿ ಮುಟ್ಟುವುದಕೆರಡು ಹೆಜ್ಜೆಯು ಸಾಕು, ಎನುವಾಗ, ವಿಧಿ ತೊಡರಿ, ಮುಗ್ಗರಿಸಿ, ಬದುಕು ತತ್ತರಿಸಿತು". 1946ರ ಒಂದು ದಿನ ಟೈಫಾಯಿಡ್ ಬಂದು ಹುಡುಗಿ ಮಲಗಿದಾಗ ಪಕ್ಕದಲ್ಲಿ ಕುಳಿತ ಯುವಕ ಸಾಂತ್ವನಗೊಳಿಸಿದ. ಹುಡುಗಿಯು ವೈದ್ಯರ ಚಿಕಿತ್ಸೆಯಿಂದ ಸಾಮಾನ್ಯ ಆರೋಗ್ಯ ಪಡೆದಳು. 'ಇನ್ನು ಪರವಾಗಿಲ್ಲ-ಆದರೆ ಇದು ಮರುಕಳಿಸಬಾರದು', ಎಂದು ವೈದ್ಯರು ಎಚ್ಚರಿಸಿದರು. ಹಾಸಿಗೆ ಹಿಡಿದು ಕಂಗಾಲಾಗಿದ್ದ ಬೊಗಸೆ ಗಣ್ಣುಗಳಿಗೆ ಮತ್ತೆ ಕಾಂತಿ ಕೂಡಿಬಂತು. ಆದರೆ ಅದು ಕೆಲವೇ ದಿನ ! ಮತ್ತೆ ಟೈಫಾಯಿಡ್ ಮರುಕಳಿಸಿತು. ಆ ಸಂಜೆ ಬಹಳ ನಿಶ್ಶಕ್ತಿಯಿಂದ, ಹುಡುಗಿ ಮಲಗಿದ್ದಾಗ, ಅವಳ ಹತ್ತಿರ ಕುಳಿತ ಯುವಕ ಹಣೆಯ ಮೇಲೆ ಕೈಯಿಟ್ಟು ಸಮಾಧಾನ ಕೊಡಲು ಪ್ರಯತ್ನಿಸಿದ. ಆಕೆಯು ಕೈ ಹಿಡಿದು ಪ್ರೀತಿಯಿಂದ ನೇವರಿಸಿದುದೇ ಅವರಿಬ್ಬರ ಮೊದಲ ಸ್ಪರ್ಶ–ಹಾಗೂ ಕೊನೆಯುದು. ಆ ರಾತ್ರಿಯೇ ಬೊಗಸೆಗಣ್ಣುಗಳ ಕಾಂತಿ ಉಡುಗಿ ಹೋಯಿತು. ಆ ಹುಡುಗಿ ಅವನ ಮನಸ್ಸಿನ ಒಂದು ಭಾವವಾಗಿ ಮಾತ್ರ ಉಳಿದಳು.

ಇದೇ ಆ ಹುಡುಗಿ, ಉಷೆಯು ಮತ್ತು ಆ ಯುವಕ, ನನ್ನ ಅಂದಿನ ಕತೆ.

ಈಗ ನಲವತ್ತೆರಡು ವರ್ಷಗಳ ಹಿಂದಿನ ಆ ಯುವಕ ಯುವತಿಯರು 'ಉಷಾಸ್ವಪ್ನ'ದಲ್ಲಿ ಉಳಿದುಕೊಂಡಿದ್ದಾರೆ. ನನ್ನ 'ಮನಸ್ಸಿನ ಭಾವ'ವಾಗಿದ್ದ ಉಷೆ, ಭಾವಗೀತೆಯಲ್ಲಿ ಉಳಿದಿದ್ದಾಳೆ. ನನ್ನ ಬದುಕಿಗೆ ಮತ್ತೆ ಋತು ವಸಂತ ಏಳೆಂಟು ವರ್ಷಗಳ ನಂತರ ಬಂದು, ಬದುಕು ಚಿಗುರಿತು. ಮತ್ತೆ ಹೊಸಬೆಳಕು ಮೂಡಿತು.

'ಗಂಗಾ ತರಂಗ'

ಸರಸ್ವತೀಪುರಂ, ಮೈಸೂರು. **ಎಸ್. ಅನಂತನಾರಾಯಣ**

# ಪ್ರೊ|| ಎಸ್. ಅನಂತನಾರಾಯಣ ಅವರ ಕೃತಿಗಳು

**ನಾಟಕ** : ಪ್ರೇಮಬಲಿ, ಮಂಗಳಾರತಿ, ವಿಪರೀತಕ್ಕಂತೆ ವಿವಾಹ !, ಸ್ವಪ್ನವಾಸವದತ್ತ, ಭಾಸನ ಪ್ರತಿಜ್ಞಾಯೌಗಂಧರಾಯಣ, ಪೂರ್ಣಾಹುತಿ

**ಕಾವ್ಯ** : ಬಾಡದ ಹೂವು, ಉಷಾ ಸ್ವಪ್ನ, ಬಣ್ಣಗಳು ಆಡಿದವು, ಸಮಗ್ರ ಕವನಗಳು

**ವಿಮರ್ಶೆ** : ಕಾರಂತರ ಕಾದಂಬರಿಗಳು, ತೆರೆದ ಕಿಟಕಿ (ವಿಮರ್ಶೆಯ ಪ್ರಬಂಧಗಳು), ಕಾವ್ಯಾಂತರಂಗ, ಯದುಗಿರಿ ದರ್ಶನ (ಪು. ತಿ. ನ. ಅವರ ಕೃತಿಗಳು), ಸೈಲಾಸ್ ಮಾರ್ನರ್, ಭಾವಗೀತೆ (ಸಾಹಿತ್ಯ ಅಕಾದೆಮಿಗಾಗಿ)
P. T. Narasimhachar (ಇಂಗ್ಲಿಷಿನಲ್ಲಿ) ಪರಿಚಯ ಗ್ರಂಥ,
ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ
ಕಾರಂತರು ಮತ್ತು ನಿಸರ್ಗ (ಪುತ್ತೂರು ಕರ್ನಾಟಕ ಸಂಘಕ್ಕಾಗಿ)

**ಕಾದಂಬರಿ** : ಪಯಣದ ಹಾದಿಯಲ್ಲಿ, ಅತ್ತಿಗೆ, ಮುರುಕು ಮಂಟಪ, ತೀರದ ಬಯಕೆ, ಆಲದ ಹೂವು, ಹಣ್ಣು ಹಸುರು, ಒಂದು ಆತ್ಮಹತ್ಯೆಯ ಕಥೆ

**ಸಣ್ಣ ಕತೆಗಳು** : ಮೈಥಿಲೀ, ಬಯಕೆಯ ಬೇಲಿ, ಬೆಳದಿಂಗಳ ರಾತ್ರಿಯಲ್ಲಿ

**ಮಕ್ಕಳ ಸಾಹಿತ್ಯ** : ಮಾಯಾದೀಪ, ಅದ್ಭುತ ಚಹಾ ಪಾತ್ರೆ, ಉರಾಹೀಮ, ಮೊಲದ ನ್ಯಾಯ, ಚೀನ, ಪೆದ್ದಮಹಾಪ್ರಭು

**ಇತರ** : ಇಂಥವರೂ ಇದ್ದಾರೆ, ಬಾಬು ರಾಜೇಂದ್ರ ಪ್ರಸಾದ್, ಆಧುನಿಕ ಚೀನಾ, ಭರತನ ನಾಟ್ಯಶಾಸ್ತ್ರ, ತೆಲಂಗಾಣ ಹೋರಾಟ,
ಮುಖಗಳ ಹಿಂದಿನ ಮುಖಗಳು

**ಅನುವಾದ** : ನಮ್ಮ ಸಂಸ್ಕೃತಿ, ಕರ್ನಾಟಕ ಸಂಗೀತ ರತ್ನಗಳು, ಬಾಲಗಂಗಾಧರ ತಿಲಕ್, ಎಲ್ಲೆಯರಿಯದ ಕಡಲು, ಜ್ವಾಲಾಮುಖಿ, ಚಳಿಯ ಸುಳಿಯಲ್ಲಿ, ನಿಷ್ಕೃತಿ, ಸ್ವಾಮಿ, ದತ್ತಾ, ದೊಡ್ಡ ಕಾಡಿನಲ್ಲಿ ಪುಟ್ಟಮನೆ, ಪ್ಲಂ ನದಿಯ ತೀರದಲ್ಲಿ, ಹುಲ್ಲುಗಾವಲಿನಲ್ಲಿ ಪುಟ್ಟಮನೆ, ರೈತರ ಹುಡುಗಿ, ಸಿಲ್ವರ್ ಲೇಕ್ ದಡದಲ್ಲಿ, ಹುಲ್ಲುಗಾವಲಿನಲ್ಲಿ ಪುಟ್ಟ ಪಟ್ಟಣ, ಡೇಗೆ ಹಕ್ಕಿ (ವಿಶ್ವ ಕಥಾ ಸಾಹಿತ್ಯ), ಅಮೇರಿಕಾದಲ್ಲಿ ಶಿಕ್ಷಣ